# ಭಾರತೀಯ

# ರಾಷ್ಟ್ರಧ್ವಜ

ಲೇಖಕರು

**ಡಾ. ನಾರಾಯಣ ಸುಬ್ಬರಾವ ಹರ್ಡೀಕರ**

ಪ್ರಕಾಶಕರು

**ಲಕ್ಷ್ಮಣ ಸುಬ್ಬರಾವ ಹರ್ಡೀಕರ**

೭೫೩ ಸದಾಶಿವಪೇಟ, ಪುಣೆ.

ಮುದ್ರಕರು

**ಖಂಡೋ ರಾಮಚಂದ್ರ ಭಿಸೆ**

ಕರ್ನಾಟಕ ಪ್ರಿಂಟಿಂಗ ವರ್ಕ್ಸ,

ಧಾರವಾಡ.

೧೯೩೧

ಬೆಲೆ ೨ ಆಣೆ.

# ಮುನ್ನುಡಿ

ರಾಷ್ಟ್ರಧ್ವಜದ ವಿಷಯವಾಗಿ, ಸಂಪೂರ್ಣ ಜ್ಞಾನವನ್ನು ದೊರಕಿಸಿ ಅ‌ನ್ನು ಜಾಗ್ರತವಾದ ಹಿಂದೀ ಜನತೆಯ ಮುಂದೆ ಇಟ್ಟು ಸದ್ಯಕ್ಕೆ ಎಲ್ಲೆಡೆ ಯಲ್ಲಿಯೂ ಆಚರಿಸಲ್ಪಡುತ್ತಿರುವ ಧ್ವಜವಂದನೆಯ ಕಾರ್ಯವನ್ನು ಕ್ರಮ ಬ‌ವಾದ ಏಕರೂಪತೆಯಿಂದ ನಡೆಸಬೇಕೆಂಬ ಇಚ್ಛೆಯು ಈಗ ಎರಡು ಮೂರು ವರ್ಷಗಳಿಂದಲೂ ನಮ್ಮ ಮನಸ್ಸಿನಲ್ಲಿತ್ತು. ಆದರೆ ಕಾರ್ಯ ‌ಸಲ್ಯದ ಮೂಲಕ ಹಾಗೆ ಮಾಡಲು ನಮಗೆ ತಿಲಮಾತ್ರವೂ ಅವಸರ ದೊ‌ಗುಲಿಲ್ಲ. ಮೊನ್ನೆ ಠಾಣೆಯ ಜೇಲಿನಿಂದ ನಮ್ಮ ಬಿಡುಗಡೆಯಾದ ‌ರೆ ಸ್ವಲ್ಪ ವಿಶ್ರಾಂತಿ ಹೊಂದಲಿಕ್ಕೆಂದು ಬುಲಢಾಣೆಯಲ್ಲಿ ಕೆಲವು ‌ಗಳ ವರೆಗೆ ಇದ್ದೆವು. ಆಗ ನಮಗೆ ಸಿಕ್ಕ ವೇಳೆಯಲ್ಲಿ ಈ ಲೇಖವು ‌ಲ್ಪಟ್ಟಿತು.

‌ಾವು ಸಂಸ್ಥಾಪಿಸಿದ "ಹಿಂದುಸ್ಥಾನೀ ಸೇವಾದಲ"ವೆಂಬ ಸಂ‌ಸ್ಥೆಯದ ಮೂರು ಬಣ್ಣದ ರಾಷ್ಟ್ರಧ್ವಜದ ಮತ್ತು ಅದರ ವಂದನ ಅಭ್ಯಾಸವನ್ನು ಶಾಸ್ತ್ರೋಕ್ತವಾಗಿ ಮಾಡಿ ತನಗೆ ಸಾಧ್ಯವಿದ್ದಮಟ್ಟಿಗೆ ‌ಸಂದಿಗೊಂದಿಗಳಲ್ಲಿಯೂ ಅದರ ಪ್ರಚಾರ ಮಾಡುವ ಕಾರ್ಯ ‌ಕೊಂಡಿದೆಯೆಂಬದು ಎಲ್ಲರಿಗೂ ಗೊತ್ತಿದೆ. ಆದರೂ ಅದರಲ್ಲಿ ತಪ್ಪು ‌ಳಿದೇ ಉಳಿದಿರುವವು. ಮತ್ತು ಎಲ್ಲ ಕಡೆಗಳಲ್ಲಿಯೂ ಧ್ವಜವಂದ‌ನಾವು ಬಯಸಿದಂತೆ ಜರಗುವದಿಲ್ಲ ಮೂಲತಃ ಜನತೆಗೆ ರಾಷ್ಟ್ರಧ್ವಜ‌ದ ಅರ್ಥವೇ ತಿಳಿಯದೇ ಹೋದ ಕಾರಣ ಅದರ ವಂದನಾ‌ವ ಕಲ್ಪನೆಯಾದರೂ ಅವರಿಗೆ ಹೇಗೆ ಬಂದೀತು? ಅರ್ಥಾತ್ ‌ಲು ರಾಷ್ಟ್ರಧ್ವಜದ ವಿಷಯಕ್ಕೆ ಎಲ್ಲ ಪರಿಚಯವನ್ನು ಮಾಡಿಕೊಟ್ಟು, ‌ಅದರ ವಂದನಾ ವಿಧಿಯ ಕಲ್ಪನೆಯನ್ನು ಶಾಸ್ತ್ರೋಕ್ತವಾಗಿ ಮಾಡಿ‌ಬೇಕೆಂದು ಮನಸ್ಸಿನಲ್ಲಿ ಬಂದುದರಿಂದ ನಾವು ಈ ಲೇಖವನ್ನು ಬರೆ‌ಯಲು ಉಪಕ್ರಮಿಸಿದ್ದೇವೆ.

ಪ್ರಸ್ತುತ ವಿಷಯವನ್ನು ಕುರಿತು ಶಾಸ್ತ್ರೋಕ್ತವಾಗಿ ಬರೆಯಲ್ಪಟ್ಟಂಥ ಒಂದು ಪುಸ್ತಕವಾದರೂ ಈಗ ಹಿಂದುಸ್ಥಾನದಲ್ಲಿ ಕಂಡುಬರುವದಿಲ್ಲ. ಅಷ್ಟೇಕೆ? ಈ ಸಂಬಂಧದ ವಿಚಾರವಾದರೂ ಸಂಪೂರ್ಣವಾಗಿ ಎಲ್ಲಿಯೂ ಆದಂತೆ ಕಾಣಿಸುವದಿಲ್ಲ. ಆದ್ದರಿಂದಲೇ ಈ ವಿಷಯವನ್ನು ಕುರಿತು ಬರೆಯುವದು ಹೆಚ್ಚು ಅವಶ್ಯವಾದದ್ದೆಂದು ನಮಗೆ ಅನಿಸಿತು.

ಈ ಚಿಕ್ಕ ಪುಸ್ತಕದಲ್ಲಿ ಬರೆಯತಕ್ಕ ಅನೇಕ ಮಾತುಗಳು ಇನ್ನೂ ಬರೆಯದೆ ಉಳಿದಿವೆ ಎಂಬದನ್ನು ನಾವು ಸಂಪೂರ್ಣವಾಗಿ ಅರಿತಿರುವೆವು. ಈ ಲೇಖನದ ಮೊದಲನೆಯ ಆವೃತ್ತಿಯು ಮುಗಿದು ಎರಡನೆಯ ಆವೃತ್ತಿಯನ್ನು ತೆಗೆಯುವ ಸುಯೋಗವು ಒದಗುವ ವರೆಗೆ ನಾವು ನಮ್ಮಾ ವಿಷಯದ ಅಭ್ಯಾಸವನ್ನು ಹಾಗೆಯೇ ಮುಂದರಿಸುವೆವು. ಮತ್ತು ಜಗತ್ತಿನಲ್ಲಿಯ ಸ್ವತಂತ್ರ ದೇಶಗಳ ಧ್ವಜದ ವಿಷಯಕವಿರುವ ಬೇರೆ ಬೇರೆ ಕಲ್ಪನೆಗಳ ಜ್ಞಾನವನ್ನು ಮಾಡಿಕೊಂಡ ಬಳಿಕ ಎರಡನೆಯ ಆವೃತ್ತಿಯಲ್ಲಿ ಅದರ ಸಮಾವೇಶವನ್ನು ಮಾಡುವೆವು. ಅಲ್ಲಿಯ ವರೆಗಾದರೂ ಈ ಲೇಖನದ ಉಪಯೋಗವಾದೀತೆಂದು ನಮಗೆ ಆಶೆಯಿದೆ.

ನಾವು ಇನ್ನೂ ಪರತಂತ್ರರಿದ್ದೇವೆ. ಎರಡನೆಯವರು ಕುಣಿಸಿದ ಹಾಗೆಯೇ ಕುಣಿಯಹತ್ತಿದ್ದೇವೆ. ಈಗೀಗ ನಮಗೆ ಎಲ್ಲಿಯೋ ಜ್ಞಾನದ ಅರುಣೋದಯವಾಗಹತ್ತಿದೆ. "ಈ ರಾಷ್ಟ್ರವು ನನ್ನದು; ನಾನು ಈ ರಾಷ್ಟ್ರದವನು" ಎಂಬ ಅರಿವು ಈಗೀಗ ನಮ್ಮಲ್ಲಿ ಹುಟ್ಟಹತ್ತಿದೆ. "ಭಾರತವು ನಮ್ಮ ದೇಶವು, ಪರಕೀಯರದಲ್ಲ. ಅದರ ಮೇಲಿನ ಒಡೆತನವು ನಮ್ಮದು ಹೆರವರದಲ್ಲ"ವೆಂಬೀ ಕಲ್ಪನೆಗಳು ಇತ್ತಿತ್ತಲಾಗಿ ನಮ್ಮನ್ನು ಸೋಂಕಹತ್ತಿವೆ. ನಮ್ಮಾ ದೇಶವು ಇತರ ರಾಷ್ಟ್ರಗಳಂತೆ ಸ್ವತಂತ್ರವಾಗಬೇಕು. ಮತ್ತು ಅದಕ್ಕಾದರೂ ಒಂದು ಧ್ವಜವಿರಬೇಕೆಂದು ನಮಗೆ ಈಗ ತಾನೆ ಅನಿಸಹತ್ತಿದೆ. ಆದ್ದರಿಂದಲೇ ಈಗ ಹಿಂದುಸ್ಥಾನದಲ್ಲೆಲ್ಲ "ಚರಖಾ" ಸಹಿತವಾದ ಮೂರು ಬಣ್ಣದ ಧ್ವಜಗಳು ನಮ್ಮ ರಾಷ್ಟ್ರದ ಚಿನ್ಹಗಳೆಂದು ಜನರಿಂದ ಪ್ರೇಮಾದರಗಳನ್ನು ಹೊಂದಿ ಕಂಗೊಳಿಸುತ್ತಿರುವವು. ಬೇರೆಬೇರೆ ಜಾತಿಗಳಿಂದಲೂ ನಾನಾ ಪಂಥಗಳಿಂದಲೂ ವಿವಿಧ

ಮತಗಳಿಂದಲೂ ವಿಚ್ಛಿನ್ನವಾದ ನಮ್ಮೀ ದುರ್ದೈವೀ ಪರತಂತ್ರ ದೇಶದಲ್ಲಿ ಈ ಮೂರುಬಣ್ಣದ ಧ್ವಜವು ಒಮ್ಮನಿಸಿನಿಂದ ಅಂಗೀಕೃತವಾದದ್ದು ನಿಜವಾಗಿಯೂ ಸುಚಿನ್ಹವೇ ಸರಿ.

ಹೀಗಿರುತ್ತಿರಲು "ಈ ಧ್ವಜವು ನಮಗೆ ಸಮ್ಮತವಿಲ್ಲ ಅದರ ವಿಶಿಷ್ಟ ಬಣ್ಣಗಳು ನಮಗೆ ಬೇಡ. ಅದರ ಮೇಲೆ ಚಿತ್ರಿಸಿದ ರಾಟೆಯ ಅವಶ್ಯಕತೆಯಿಲ್ಲ. ಇದು ರಾಷ್ಟ್ರಧ್ವಜವಲ್ಲ"ವೆಂಬರ್ಥದ ಕೆಲವು ಕೂಗುಗಳು ನಮ್ಮ ಕಿವಿತನಕ ಬಂದಿವೆ. ಆದರೂ ನಮ್ಮ ರಾಷ್ಟ್ರವು ಇನ್ನೂ ಬಾಲ್ಯಾವಸ್ಥೆಯಲ್ಲಿ ಇರುವದರಿಂದ ಸದ್ಯದ ಮೂರು ಬಣ್ಣದ ಧ್ವಜದ ವಿಷಯುವಾಗಿ ಕೆಲವು ಸ್ಥಳಗಳಲ್ಲಿ ವಿರುದ್ಧ ಧ್ವನಿಯು ಕೇಳಬರುವದು ಸ್ವಾಭಾವಿಕವೇ ಎಂಬದನ್ನು ನಾವು ಮರೆಯಕೂಡದು. ನಮ್ಮ ರಾಷ್ಟ್ರವು ಪೂರ್ಣ ಸ್ವತಂತ್ರವಾದ ಬಳಿಕ ಈ ಧ್ವಜವು ಇದೇ ರೂಪದಲ್ಲಿಯೇ ಉಳಿದೀತೆಂದು ಈಗಲೇ ಹೇಳಲಿಕ್ಕಾಗದು. ಪರತಂತ್ರ ದೇಶಗಳ ಇತಿಹಾಸವು ನಮಗೆ ಏನು ಕಲಿಸುತ್ತಿದೆ? ನಮ್ಮ ಈಗಿನ ಧ್ವಜವು ಮುಂದೆ ಒಂದು ವೇಳೆ ಪಲ್ಲಟಿಸಲೂಬಹುದು. ಆದರೂ ಸದ್ಯಕ್ಕೆ ಯಾವ ಧ್ವಜದ ಸಲುವಾಗಿ. ಸಾವಿರಾರು ತರುಣರು ಅತುಲ ಸ್ವಾರ್ಥತ್ಯಾಗಮಾಡಿದರೋ, ಕಡುತರವಾದ ಕಷ್ಟವನ್ನು ಸಹಿಸಿದರೋ ಆ ಮೂರು ಬಣ್ಣದ ಧ್ವಜವನ್ನು ನಾವು ಸ್ವತಂತ್ರರಾಗುವ ವರೆಗಾದರೂ ಯಾವುದೇ ವಿಧವಾಗಿ ಗುಣಗುಟ್ಟದೆ ನಮ್ಮದೆಂದು ನಾವು ಏಕೆ ಅನ್ನಬಾರದು? ಮತ್ತು ವಿಧಿಪೂರ್ವಕವಾಗಿ ಅದಕ್ಕೆ ವಂದನೆಯನ್ನಾದರೂ ಏಕೆ ಮಾಡಬಾರದು? ಧ್ವಜವು ರಾಷ್ಟ್ರದ ಜೀವಾಳವು. ಅದು ರಾಷ್ಟ್ರಕ್ಕೆ ಅತ್ಯಂತ ಅವಶ್ಯಕವಾದದ್ದೆಂಬ ಕಲ್ಪನೆಯಾದರೂ ಮೊದಲು ನಮ್ಮಲ್ಲಿ ಬೇರೂರಲಿ. ಹಾಗೂ ನಮ್ಮ ಬಾಲಬಾಲಿಕೆಯರ ಕಣ್ಣೆದುರಿಗೆ ಅದು ಸರ್ವದಾ ನಲಿದಾಡಲಿ. ತತ್ಪ್ರೀತ್ಯರ್ಥವಾಗಿಯೇ ಅರ್ಥಾತ್ ನಮ್ಮ ತಾಯ್ನಾಡಿನ ಪ್ರೀತ್ಯರ್ಥವಾಗಿಯೇ ಬಲಿದಾನ ಕೊಡಬೇಕಾಗಿದೆಯೆಂಬ ಬುದ್ಧಿಯು ಅವರಲ್ಲಿ ಹಬ್ಬಲಿ. ಅಂದರೆ ಸ್ವಾತಂತ್ರ್ಯವು ದೊರೆತ ಬಳಿಕ ಬದಲಿಸಲ್ಪಡುವ ಧ್ವಜದ ವಿಷಯುವಾಗಿಯಾದರೂ ಅವರಿಗೆ ಅಭಿಮಾನವು ಹುಟ್ಟುವದು. ಹಾಗು ಅದಕ್ಕಾಗಿ ತಮ್ಮ ಪ್ರಾಣಾರ್ಪಣವನ್ನು ಮಾಡಲು ಸಹ ಸಿದ್ಧರಾಗುವರು.

ಧ್ವಜವು ಹೇಗಿರಬೇಕೆಂಬ ವಾದವನ್ನು ಬದಿಗಿರಿಸಿ ಧ್ವಜದ ವಿಷಯವಾಗಿ ಪ್ರೇಮವೂ ಆದರವೂ ಅಭಿಮಾನವೂ ಆತ್ಮೀಯತೆಯೂ ಉತ್ಪನ್ನವಾಗುವದಕ್ಕಾಗಿಯೂ ಅದರ ವಿಷಯವಾಗಿ ಆಗುವ ಎಲ್ಲ ವಿಧಿಗಳ ಶಾಸ್ತ್ರೋಕ್ತ ಜ್ಞಾನವನ್ನು ಮಾಡಿಕೊಳ್ಳುವುದಕ್ಕಾಗಿಯೂ ಈ ಲೇಖನದ ಉಪಯೋಗವಾಗಬೇಕೆಂಬದು ಅಂತಃಕರಣಪೂರ್ವಕವಾದ ನಮ್ಮ ಇಚ್ಛೆಯು. ಚಿಕ್ಕಮಕ್ಕಳಿಗೆ ಪಾಠಗಳನ್ನು ಕಲಿಸಬೇಕೆಂದು ತಿಳಿದು ಈ ಪುಸ್ತಕವನ್ನು ಅತ್ಯಂತ ಮನಮುಟ್ಟಿ ಬರೆದು ದೊಡ್ಡಕ್ಷರಗಳಿಂದ ಮುದ್ರಿಸಿರುವೆವು. ಮತ್ತು ಅದರ ಸಾರ್ವತ್ರಿಕ ಪ್ರಸಾರವಾಗಬೇಕೆಂದು ತೀರ ಕಡಿಮೆ ಬೆಲೆಯನ್ನಿಡುವ ಎಚ್ಚರಿಕೆಯನ್ನಾದರೂ ತಾಳಿದ್ದೇವೆ. ಈ ಸಂಗತಿಗಳನ್ನು ಅರಿತುಕೊಂಡು ಎಲ್ಲ ಪ್ರಬುದ್ಧ ಬಂಧು ಭಗಿನಿಯರು ತಾವು ಸ್ವತಃ ಅರಿತುಕೊಂಡು ತಮ್ಮ ಚಿಕ್ಕಮಕ್ಕಳಿಗಾದರೂ ಅದನ್ನು ಚನ್ನಾಗಿ ತಿಳಿಸಿ ಹೇಳಿ ರಾಷ್ಟ್ರಧ್ವಜದ ವಿಷಯವಾಗಿ ಅವರ ಮನಸ್ಸಿನಲ್ಲಿ ಪ್ರೇಮವನ್ನೂ ಆದರವನ್ನೂ ಹುಟ್ಟಿಸಬೇಕೆಂದು ಅವರಿಗೆ ನಮ್ಮ ನಮ್ರ ಪ್ರಾರ್ಥನೆಯಿದೆ.

ಲೇಖವು ಮೊದಲು ಮರಾಠಿಯಲ್ಲಿ ಬರೆಯಲ್ಪಟ್ಟಿತ್ತು. ಅದಕ್ಕೆ ನಮ್ಮ ಸಂಸ್ಥೆಯ ಸಂಚಾಲಕರ ಸಹಾಯವಂತೂ ಆಗೇ ಆಯಿತು. ಅದರ ಹೊರತು ಪ್ರಸಿದ್ಧ ನಾಟಕಕಾರರಾದ ಶ್ರೀಯುತ ಭಾರ್ಗವರಾಮ ವಿಠ್ಠಲ ವರೇರಕರ; ಬುಲಢಾಣೆಯಲ್ಲಿಯ ಶಿಕ್ಷಕರಾದ ಶ್ರೀ. ಗೋವಿಂದ ದಿನಕರ ನಾಮ ಜೋಶಿ; ಮತ್ತು ಅಲ್ಲಿಯ ನನ್ನ ಅನೇಕ ತರುಣ ಮಿತ್ರರಲ್ಲದೆ ಅಕೋಲೆಯ ಸರಸ್ವತಿ ಮಂದಿರ ಮತ್ತು ರಾಷ್ಟ್ರೀಯ ಶಾಲೆಯಲ್ಲಿಯ ಶಿಕ್ಷಕರಾದ ಶ್ರೀ. ಲಕ್ಷ್ಮಣರಾವ ವೆಂಪಳೆ ಮೊದಲಾದ ಸದ್ಗೃಹಸ್ಥರೆಲ್ಲರೂ ನನಗೆ ಸಹಾಯಮಾಡಿದರು. ಆದುದರಿಂದ ಈ ಎಲ್ಲ ಜನರಿಗೂ ನಾನು ಋಣಿಯಾಗಿರುವೆನು.

ಮೂಲ ಮರಾಠಿ ಲೇಖನವನ್ನು ಕನ್ನಡಿಸಿಕೊಟ್ಟದ್ದಕ್ಕಾಗಿ ವಿಜಾಪುರದ ಶ್ರೀ. ಶ್ರೀನಿವಾಸರಾವ ಕೌಜಲಗಿ ಇವರಿಗಾದರೂ ನಾನು ಉಪಕೃತನಾಗಿದ್ದೇನೆ.

ಹುಬ್ಬಳ್ಳಿ
೧೦-೨-೧೯೩೧

**ನಾನಾ ಹರ್ಡೀಕರ.**

# ಪ್ರಕಾಶಕರ ನಿವೇದನವು

ನಮ್ಮ ಪರಮಪ್ರಿಯ ಬಂಧುಗಳಾದ ಡಾ. ನಾನಾಸಾಹೇಬ ಹರ್ಡೀಕರರವರು 'ಭಾರತೀಯ ರಾಷ್ಟ್ರಧ್ವಜ'ವೆಂಬ ಪುಸ್ತಕವನ್ನು ಬರೆದು ಸಿದ್ಧಪಡಿಸಿದರು. ಇಷ್ಟರಲ್ಲಿಯೇ ಅಕಸ್ಮಾತ್ತಾಗಿ ಅವರ ಮೇಲೆ ಮರ್ಧರ ಪ್ರಸಂಗವು ಒದಗಿತು. ಪುನಃ ಅವರು ಮುಂಬಯಿಯಲ್ಲಿ ಸೆರೆಹಿಡಿಯಲ್ಪಟ್ಟು ೧೯೩೧ನೆಯ ಜನವರಿ ೧೦ನೆಯ ತಾರೀಖಿಗೆ ಸ್ವರಾಜ್ಯಾಶ್ರಮಕ್ಕೆ ಕಳುಹಿಸಲ್ಪಟ್ಟರು. ಇದು ಸರ್ವಶ್ರುತವಾದ ಸಂಗತಿಯೇ ಸರಿ. ಈ ಪುಸ್ತಕವನ್ನು ಅವರು ಭಾರತೀಯ ಸ್ವಾತಂತ್ರ್ಯದಿನ ಅಂದರೆ ೧೯೩೧ನೆಯ ಜನವರಿ ೨೬ನೆಯ ತಾರೀಖಿನ ದಿವಸ ಶುಭಮುಹೂರ್ತದಲ್ಲಿ ಪ್ರಸಿದ್ಧಮಾಡಲಪೇಕ್ಷಿಸಿದ್ದರು. ಆದರೆ ತತ್ಪೂರ್ವದಲ್ಲಿಯೇ ಅವರು ಕಾರಾಗ್ರಹವಾಸವನ್ನು ಸ್ವೀಕರಿಸಿದ್ದರಿಂದ ಅವರ ಇಚ್ಛಾನುಸಾರವಾಗಿ ಈ ಪುಸ್ತಕದ ಪ್ರಕಾಶನ ಕಾರ್ಯಭಾರವನ್ನು ನಾನು ಹೊರಬೇಕಾಯಿತು. ನಿಜವನ್ನು ಹೇಳುವುದಾದರೆ, ಇಂಥ ಹೊಣೆಗಾರಿಕೆಯ ಕೆಲಸವು ಬೇರೊಬ್ಬ ತಜ್ಞ ಪಂಡಿತರ ಸಹಾಯದ ಹೊರತು ನನ್ನ ಕಡೆಯಿಂದ ಕೊನೆಗಾಣುವುದು ಅಶಕ್ಯವಾದ ಸಂಗತಿಯೇ ಸರಿ. ಆದರೆ ಈ ಗ್ರಂಥಕರ್ತರ ಹಳೆಯ ಸನ್ಮಾನ್ಯ ಮಿತ್ರರಾದ 'ಲೋಕಶಿಕ್ಷಕ' ಎಂಬ ಮಹಾರಾಷ್ಟ್ರ ಮಾಸಪತ್ರಿಕೆಯ ಸುಪ್ರಸಿದ್ಧ ವಿದ್ವಾನ್ ಸಂಪಾದಕರಾದ ಪ್ರೋಫೇಸರ ಗಣೇಶ ಗಂಗಾಧರ ಜಾಂಭೇಕರ ಇವರು ಈ ಪುಸ್ತಕಕ್ಕೆ ಬಂದ ಅನಿವಾರ್ಯ ಸಂಕಟವನು ಲಕ್ಷ್ಯದಲ್ಲಿ ತೆಗೆದುಕೊಂಡು ಪುಸ್ತಕದ ಮೂಲಪ್ರತಿಯನ್ನು ಮತ್ತು ಮುದ್ರಿತ ಪ್ರತಿಗಳನ್ನು ಅತಿ ದಕ್ಷತೆಯಿಂದ ಸರಿಮಾಡಿಕೊಡುವ ಕೆಲಸವನ್ನು ಮಾಡಿದುದಲ್ಲದೆ, ಪುಸ್ತಕ ಪ್ರಕಾಶನದ ಸಂಬಂಧವಾಗಿ ಎಲ್ಲ ಕೆಲಸಗಳನ್ನು ಅತಿ ವಿಶ್ವಾಸದಿಂದ ಸ್ವಕಾರ್ಯವೆಂದೆಣಿಸಿ ಪೂರ್ಣಮಾಡಿದರು. ಇದು ಶ್ಲಾಘನೀಯ ಮಾತೇ ಸರಿ. ಎಲ್ಲ ಅಪರಿಹಾರ್ಯವಾದ ಅಡಚಣೆಗಳನ್ನು ಪರಿಹರಿಸಿ ಈ ಪುಸ್ತಕ ಪ್ರಕಾಶನದ ಮಹತ್ಕಾರ್ಯವನ್ನು ಅವರು ಕೈಕೊಂಡದ್ದರಿಂದ ಪ್ರಸ್ತುತ ಪುಸ್ತಕವು ಇಂತಹ ಅಂದಚಂದವಾದ ಸುಲಲಿತ ಮನೋಹರವಾದ ಸ್ವರೂಪದಲ್ಲಿ ಕೇವಲ ೧೦/೧೨ ದಿವಸದ ಅವಧಿಯಲ್ಲಿಯೇ

ಪ್ರಸಿದ್ಧಮಾಡಿ ನಮ್ಮ ಪ್ರಿಯವಾಚಕರ ಕೈಯಲ್ಲಿ ಕೊಡುವುದಕ್ಕೆ ಈಗ ನಾನು ಸಮರ್ಥನಾಗಿರುವೆನು. ಅರ್ಥಾತ್ ಈ ಅಮೌಲ್ಯ ಸಹಾಯದ ಬಗ್ಗೆ ಹರ್ಡೀಕರ ಬಂಧುಗಳಾದ ನಾನಾಸಾಹೇಬರವರು ಜಾಂಭೇಕರ ಇವರ ಋಣಿಯಾಗಿದ್ದು, ಇಚ್ಛೆಯ ವಿರುದ್ಧವಾದರೂ ಅವರ ಮನಃ ಪೂರ್ವಕವಾಗಿ ಆಭಾರವನ್ನು ಮನ್ನಿಸುವದು ನಮ್ಮ ಕರ್ತವ್ಯವಾಗಿರುತ್ತದೆ. ಹಾಗೆಯೇ ಈ ಪುಸ್ತಕದ ಮುಖಪೃಷ್ಟದ ಮೇಲೆ ಹಾಕಿದ ಮೂರು ಬಣ್ಣದಲ್ಲಿ ಮುದ್ರಿಸಿದ ಭಾರತೀಯ ರಾಷ್ಟ್ರಧ್ವಜವು ಮತ್ತು ಧ್ವಜವಂದನದ ನಕಾಶೆಯನ್ನು ಬಹಳ ತ್ವರಿತವಾಗಿ ಮತ್ತು ಸುಂದರವಾಗಿ ಸಿದ್ಧಪಡಿಸಿದ ಬಗ್ಗೆ ನಾವು ಪುಣೆಯಲ್ಲಿದ್ದ 'ಬಾಲೋದ್ಯಾನ' ಮುದ್ರಣಾಲಯದ ಚಾಲಕರಾದ ಶ್ರೀ. ಸಹಸ್ರಬುದ್ಧೆ ಇವರ ಮತ್ತು ಪುಸ್ತಕದ ಎಲ್ಲ ತರದ ಮುದ್ರಣ ಕೆಲಸದ ಬಗ್ಗೆ ಶ್ರೀ. ರಾಜಗುರು ಇವರ ಆಭಾರವನು ಮನ್ನಿಸುತ್ತೇವೆ.

ಮೇಲೆ ವಿವರಿಸಿದ ಸಂಗತಿಗಳನ್ನು, ಈ ಪುಸ್ತಕವನ್ನು ಮರಾಠಿ ಭಾಷೆಯಲ್ಲಿ ಮುದ್ರಿಸುವ ಕಾಲಕ್ಕೆ ಉಚಿತವಾಗಿ ಉಲ್ಲೇಖಿಸಿದ್ದೇವಷ್ಟೇ? ಈ ಪುಸ್ತಕವನ್ನು ಮರಾಠಿ ಭಾಷೆಯಲ್ಲಿ ಪ್ರಸಿದ್ಧಿಸಿದ ಬಳಿಕ,ನಮ್ಮ ಕರ್ನಾಟಕ ಭಾಂಧವರ ಹಿತಕ್ಕಾಗಿ ಕನ್ನಡದಲ್ಲಿ ಈ ಉತ್ಕೃಷ್ಟ ಪುಸ್ತಕದ ಭಾಷಾಂತರವನ್ನು ಮಾಡಿ ಪ್ರಸಿದ್ಧಗೊಳಿಸಬೇಕೆಂಬ ಲವಲವಿಕೆಯಿಂದ ನಮ್ಮ ಬಂಧುಗಳಿಗೆ ಪಿತೃಸ್ಥಾನದಲ್ಲಿದ್ದ ಪೂಜ್ಯರಾದ ಶ್ರೀ. ಗೋವಿಂದ ಗಂಗಾಧರ ಪೆಂಡಸೆ ಇವರು ಮುಂದರಿದು ಈ ಪುಸ್ತಕವನ್ನು ಮುದ್ರಿಸುವ ಸದಿಚ್ಛೆಯನ್ನು ವ್ಯಕ್ತ ಮಾಡಿದ ಮೂಲಕ ಅವರ ಇಚ್ಛೆಯ ಪ್ರಕಾರ 'ಕನ್ನಡ ರಾಷ್ಟ್ರಧ್ವಜ' ಪುಸ್ತಕವನ್ನು ಪ್ರಕಟಿಸುವ ಯತ್ನವನ್ನು ಕೈಕೊಂಡೆವು. ಈ ಕನ್ನಡ ಪುಸ್ತಕವನ್ನು ಪ್ರಕಟಿಸುವ ಮಹತ್ಕಾರ್ಯವನ್ನು ಶ್ರೀ. ಗೋವಿಂದರಾವ ಪೆಂಡಸೆ ಇವರು ಕೈಕೊಂಡು ಧಾರವಾಡದಲ್ಲಿದ್ದ ಪ್ರಸಿದ್ಧ **'ಕರ್ನಾಟಕ ಪ್ರಿಂಟಿಂಗ ವರ್ಕ್ಸ'** ಮುದ್ರಣಾಲಯದಲ್ಲಿ ಮುದ್ರಿಸಿದರು. ಮರಾಠಿ ಪುಸ್ತಕದ ಈ ಕನ್ನಡ ಆವೃತ್ತಿಯನ್ನು ಪ್ರಸಿದ್ಧಿಸುವದರಲ್ಲಿ ಅವರು ಬಹಳ ಸಹಾಯ ಮಾಡಿದರು. ಇದರ ಬಗ್ಗೆ ನಾವು ಅತ್ಯಂತ ಋಣಿಯಾಗಿದ್ದೇವೆ. ಹಾಗೆಯೆ

ಈ ಪುಸ್ತಕದ ಮುದ್ರಣದ ವಿಷಯವಾಗಿ ಬಹಳ ಜಾಗ್ರತೆಯಿಂದ ಕೆಲಸ ಮಾಡಿಸಿದ ಬಗ್ಗೆ ಕರ್ನಾಟಕ ಪ್ರಿಂಟಿಂಗ ವರ್ಕ್ಸದ ಮಾಲಕರಾದ ಶ್ರೀ. **ಯಶವಂತ ಭಾಸ್ಕರ ಜಠಾರ,** ಬಿ. ಎ., ಎಲ್ಎಲ್. ಬಿ ಇವರ ಆಭಾರವನ್ನು ಮನ್ನಿಸುತ್ತೇವೆ. ಮತ್ತು ಈ ಪುಸ್ತಕದಲ್ಲಿ ಹಾಕಿದ ಮುಖ ಪೃಷ್ಟದ ಮೇಲಿದ್ದ ಮತ್ತು ಪುಸ್ತಕದೊಳಗಿನ ಬೇರೆ ಬೇರೆ ತರಹದ ಎಲ್ಲ ಬ್ಲಾಕುಗಳನ್ನು ಸಿದ್ಧಪಡಿಸಿದ ಬಗ್ಗೆ 'ಶ್ರೀನಿವಾಸ ಮತ್ತು ಕಂಪನಿ'ಯ ಮಾಲಕರಾದ ಶ್ರೀ. ಶ್ರೀನಿವಾಸರಾವ ಪೋತದಾರ ಇವರ, ಧನ್ಯವಾದ ಪೂರ್ವಕವಾಗಿ ಆಭಾರವನ್ನು ಮನ್ನಿಸುತ್ತೇವೆ. ಮರಾಠಿ ಪ್ರತಿಯನು ಕನ್ನಡಿಸಿಕೊಟ್ಟದ್ದಕ್ಕಾಗಿ ಶ್ರೀ. ಶ್ರೀನಿವಾಸರಾವ ಕೌಜಲಗಿ ಇವರಿಗೂ ನಾನು ಕೃತಜ್ಞನಾಗಿದ್ದೇನೆ.

ಪುಣೆ
ತಾ.೧೪-೪-೧೯೩೧

ಪ್ರಕಾಶಕರು
**ಲ. ಸು. ಹರ್ಡೀಕರ.**

## ಅನುಕ್ರಮಣಿಕೆ

ಭಾರತೀಯ

# ರಾಷ್ಟ್ರಧ್ವಜವು

## ಒಂದನೆಯ ಪಾಠ

### ರಾಷ್ಟ್ರದ ಚಿನ್ಹವು

ಧ್ವಜವು ರಾಷ್ಟ್ರಜೀವಿತದ ಮೂರ್ತಿಮಂತ ಲಕ್ಷಣ ವಿದೆ. ದೇಶದಲ್ಲಿಯ ಸಕಲ ಜಾತಿ, ಧರ್ಮ, ಮತ್ತು ಪಂಗಡ ಗಳನ್ನು ಒಟ್ಟುಗೂಡಿಸುವ ಮಹಾ ಮಂತ್ರವಿದೆ. ರಾಷ್ಟ್ರ ಧ್ವಜವು ರಾಷ್ಟ್ರೀಯಭಾವನೆಯ ಉಚ್ಚತರದ ದ್ಯೋತಕ ವಿದೆ. ಧ್ವಜದ ಮಾನಾಪಮಾನವೇ ರಾಷ್ಟ್ರದ ಮಾನಾಪ ಮಾನವೆಂದು ಎಲ್ಲ ಸ್ವತಂತ್ರ ರಾಷ್ಟ್ರಗಳ ಭಾವನೆಯುಂಟು ಧ್ವಜವನ್ನು ಧಿಕ್ಕರಿಸುವವರು ದೇಶದ್ರೋಹಿಗಳು. ಧ್ವಜ ಕ್ಕೋಸುಗ ಪ್ರಾಣವನ್ನರ್ಪಿಸುವದೇ ರಾಷ್ಟ್ರದ ಸಲುವಾಗಿ ಮಾಡುವ ನಿಜವಾದ ಬಲಿದಾನವು.

ನಿಜವಾಗಿ ನೋಡಿದರೆ ಧ್ವಜವೆಂದರೆ ಯಃಕಶ್ಚಿತ್ ಬಟ್ಟೆಯ ತುಣುಕು. ಆದರೆ ಸಾಧಾರಣವಾದ ಕಲ್ಲಿನಿಂದ ದೇವರ ಮೂರ್ತಿಯನ್ನು ಮಾಡಿದ ಬಳಿಕ ಅದಕ್ಕೆ ದೇವತ್ವವು ಪ್ರಾಪ್ತ ವಾಗುವಂತೆ ಬಟ್ಟೆಗಾದರೂ ಕೆಲವು ವಿಶಿಷ್ಟ ಬಣ್ಣಗಳನ್ನು ಕೊಟ್ಟು ಅದರ ಮೇಲೆ ವಿಶಿಷ್ಟ ಚಿನ್ಹಗಳನ್ನು ಚಿತ್ರಿಸಿ ಜನ ತೆಯು ಅದಕ್ಕೆ ಧ್ವಜವೆಂದು ಮನ್ನಿಸಹತ್ತಿದರೆ ಅದೇ ಬಟ್ಟೆಗೆ

ರಾಷ್ಟ್ರಪದವು ಪ್ರಾಪ್ತವಾಗಿ ರಾಷ್ಟ್ರದ ಪ್ರತೀಕದ ಅಥವಾ ಪ್ರತಿನಿಧಿತ್ವದ ಮಾನವು ಸಿಕ್ಕುತ್ತದೆ.

ದೇವರ ಮೂರ್ತಿಯನ್ನು ಕಂಡಕೂಡಲೇ ಭಾವಿಕ ಮನುಷ್ಯನು ಸಹಜವಾಗಿಯೇ ನಮಸ್ಕರಿಸುವಂತೆ, ರಾಷ್ಟ್ರ ಧ್ವಜವನ್ನು ನೋಡಿದ ಕ್ಷಣವೇ ದೇಶದಲ್ಲಿಯ ಪ್ರತಿಯೊಬ್ಬ ಮನುಷ್ಯನು ತನ್ನ ತಲೆಯನ್ನು ಸಹಜವಾಗಿಯೇ ಬಗ್ಗಿಸುವನು; ಮತ್ತು ತನ್ನ ಎರಡೂ ಕೈಗಳನ್ನು ಭಾವಿಕತನದಿಂದ ಜೋಡಿಸು ವನು. ದೇಶದಲ್ಲಿಯ ಜನರಲ್ಲಿ ರಾಷ್ಟ್ರೀಯ ಜಾಗ್ರತೆಯು ಒಮ್ಮೆ ಉತ್ಪನ್ನವಾದರೆ ಅವರು ಆ ಧ್ವಜದ ಪ್ರೀತ್ಯರ್ಥವಾಗಿ ತಮ್ಮ ಪ್ರಾಣಗಳನ್ನು ಕೂಡ ಕೊಡಲು ಸಿದ್ಧರಾಗುವರು. ಪಾರ ತಂತ್ರ್ಯ ಶೃಂಖಲೆಯಿಂದ ಬದ್ಧವಾದ ರಾಷ್ಟ್ರಕ್ಕೆ ತನ್ನದೆಂ ಬುವ ಧ್ವಜವು ಇರುವುದೇ ಇಲ್ಲ. ಮತ್ತು ಧ್ವಜವಿಲ್ಲದ ದೇಶವು ಕೇವಲ ಗುಲಾಮರ ದೇಶವೇ ಸರಿ. ಆದ್ದರಿಂದಲೇ ಗುಲಾಮರಿಗೆ ಧ್ವಜದ ಕಲ್ಪನೆಯು ಇರುವದಿಲ್ಲ. ಒಂದುವೇಳೆ ಇದ್ದರೂ ಅದಕ್ಕೆ ಮೂರ್ತಸ್ವರೂಪವನ್ನು ಕೊಡಲು ಅವರು ಮುಂದುವರಿಯುವದಿಲ್ಲ. ಸಾರಾಂಶವೇನಂದರೆ, ರಾಷ್ಟ್ರದ ರೂಪಾಂತರವೇ ಧ್ವಜವು. ಅರ್ಥಾತ್ ಧ್ವಜದಲ್ಲಿಯೇ ರಾಷ್ಟ್ರ ವಿದೆಯೆಂದು ತಿಳಿದು ನಾವು ದೇವರ ಮೂರ್ತಿಗೆ ಆದರ ಪೂರ್ವಕ ನಮಸ್ಕಾರ ಮಾಡುವಂತೆ ಧ್ವಜಕ್ಕಾದರೂ ನಾವು ಶಿರಬಾಗಿಸಬೇಕು.

## ಎರಡನೆಯ ಪಾಠ

ಜಗತ್ತಿನಲ್ಲಿಯ ಪ್ರತಿಯೊಂದು ಸ್ವತಂತ್ರ ರಾಷ್ಟ್ರಕ್ಕೂ ತನ್ನದೆಂಬ ವಿಶಿಷ್ಟ ಧ್ವಜವೊಂದು ಇದ್ದೇ ಇರುತ್ತದೆ. ಮತ್ತು ಆ ರಾಷ್ಟ್ರದಲ್ಲಿಯ ಪ್ರತಿಯೊಬ್ಬ ನಾಗರಿಕನು ತನ್ನ ಧ್ವಜದ ಮಾನರಕ್ಷಣೆಯನ್ನು ಮಾಡುವುದು ತನ್ನ ಆದ್ಯ ಕರ್ತವ್ಯ ವೆಂದು ತಿಳಿಯುತ್ತಾನೆ. ಒಮ್ಮೆ ಒಬ್ಬ ಅಮೇರಿಕನ್ನನು ಚಿಕ್ಕೆ ಮತ್ತು ಪಟ್ಟೆಗಳಿಂದ (Stars & Stripes) ಯುಕ್ತವಾದ, ಅಮೇರಿಕೆಯ ಧ್ವಜದ ಮೇಲೆ ಮೈಮರೆತು ತನ್ನ ಕಾಲನ್ನಿಟ್ಟನು. ಕೂಡಲೇ ಅಮೇರಿಕದ ನಾಗರಿಕರು ಆ ಗೃಹಸ್ಥನನ್ನು ಸುತ್ತುಗಟ್ಟಿದರು. ಮತ್ತು ಅವನು ಆ ಧ್ವಜವನ್ನು ನಮಸ್ಕರಿಸಿ ಅದರ ಸನ್ಮಾನ ಮಾಡಿದ ನಂತರವೇ ಅವನನ್ನು ಮುಂದೆ ಹೋಗಗೊಟ್ಟರು. ನೋಡಿರಿ! ತಮ್ಮ ಧ್ವಜಕ್ಕಾಗಿ ಅಮೇರಿಕನ್ನರ ಅಭಿಮಾನವೆಂತಹದು !

ಇಂಗ್ಲಂಡದ ರಾಣಿಯಾಗಿದ್ದ ಎಲಿಝಾಬೇಥಳ ವಿಷಯ ವಾಗಿಯೂ ಇಂತಹದೇ ಒಂದು ಸಂಗತಿಯೂ ಪ್ರಸಿದ್ಧವಿದೆ. ಒಂದು ದಿನ ಅವಳು ತನ್ನ ರಥದಿಂದ ಕೆಳಗಿಳಿಯುತ್ತಿರುವಾಗ ನೆಲದ ಮೇಲಿನ ಕೆಸರು ಅವಳ ಕಾಲಿಗೆ ತಗಲಬಾರದೆಂದು ಹತ್ತಿರವೇ ಇದ್ದ ಒಬ್ಬ ಅಧಿಕಾರಿಯು ತನ್ನ ಬಳಿಯಲ್ಲಿದ್ದ ಇಂಗ್ಲಂಡದ ಒಂದು ರಾಷ್ಟ್ರಧ್ವಜವನ್ನು ಅವಳ ಮುಂದೆ ಹಾಸಿದನು. ಮತ್ತು ಅದರ ಮೇಲೆ ಕಾಲಿಟ್ಟು ಮುಂದೆ ಹೋಗಲು ರಾಣಿಗೆ ಬಿನ್ನವಿಸಿಕೊಂಡನು. ಆದರೆ ಎಲಿಝಾ ಬೇಥಳು ಆ ಧ್ವಜವನ್ನು ನೋಡಿದ ಕ್ಷಣವೇ ಅದನ್ನು ತಟ್ಟನೆ ಎತ್ತಿಕೊಂಡು ತಲೆಯ ಮೇಲೆ ಇಟ್ಟುಕೊಂಡಳು. ಮತ್ತು

ತನ್ನ ಮೈಮೇಲಿದ್ದ ನಿಲುವಂಗಿಯನ್ನು ಕೆಳಗೆ ಹಾಸಿ ಅದರ ಮೇಲೆ ಕಾಲಿಟ್ಟು ನಡೆದುಹೋದಳು. ಆಂಗ್ಲೇಯರಾದ ನಿಮಗೆ ನಿಮ್ಮ ರಾಷ್ಟ್ರಧ್ವಜವನ್ನು ಹೇಗೆ ರಕ್ಷಿಸಬೇಕೆಂಬದು ತಿಳಿಯದಹೊರತು ನಿಮ್ಮ ರಾಷ್ಟ್ರದಲ್ಲಿ ಉನ್ನತಿಯಾಗಲಾರದು ಎಂದು ಅಧಿಕಾರಿಗೆ ಎಚ್ಚರಿಕೆಯನ್ನು ಕೊಡಲು ಮಾತ್ರ ಅವಳು ಮರೆಯಲಿಲ್ಲ.

ಈ ರೀತಿಯಿಂದ ಸ್ವತಂತ್ರ ರಾಷ್ಟ್ರದಲ್ಲಿಯ ಜನರು ಧ್ವಜಾಂಕಿತವಾದ ಕಾಗದದ ಚಿತ್ರಗಳನ್ನೂ ಅಷ್ಟೇಕೆ ? ಆ ಚಿತ್ರಗಳ ಚೂರುಗಳನ್ನು ಸಹ ಮರ್ಯಾದೆಯಿಂದ ನೋಡುವರು ಮತ್ತು ತಮ್ಮ ರಾಷ್ಟ್ರದ ಮರ್ಯಾದೆಯನ್ನು ಬೆಳೆಯಿಸಿ ಅದರ ವಿಷಯವಾಗಿ ಆದರವನ್ನೂ ಪ್ರೇಮವನ್ನೂ ವೃದ್ಧಿಂಗತ ಮಾಡುವರು. ಇದಕ್ಕೇ ಧ್ವಜದ ಅರ್ಥಾತ್ ರಾಷ್ಟ್ರದ ಮರ್ಯಾದೆಯನ್ನು ಕಾಯುವದೆಂದೆನ್ನುವರು. ತನ್ನ ರಾಷ್ಟ್ರಧ್ವಜದ ಅಪಮಾನವನ್ನು ಸ್ವತಂತ್ರ ದೇಶದಲ್ಲಿಯ ಯಾವ ವೀರ ಪುರುಷನೂ ಸಹಿಸಲಾರನು.

ಪೂರ್ಣ ಸ್ವತಂತ್ರವಾದ ರಾಷ್ಟ್ರದಲ್ಲಿಯ ಧ್ವಜದ ಅಪಮಾನವನ್ನು ಯಾರಾದರೂ ಶತ್ರುಗಳು ಮಾಡಿದರೆ ಅಲ್ಲಿಯ ಸರಕಾರವು ಅವರನ್ನು ತತ್ಕ್ಷಣವೇ ಹಿಡಿದು ಕಠೋರ ಶೀಕ್ಷೆಯನ್ನು ವಿಧಿಸುವರು. ನಮ್ಮ ದುರ್ದೈವದಿಂದ ಪಾರತಂತ್ರ್ಯ ಪಂಕದಲ್ಲಿ ಒದ್ದಾಡುತ್ತ ಬಿದ್ದಿರುವ ಭರತಖಂಡಕ್ಕೆ ಜಗತ್ತು ಮನ್ನಿಸಿದಂತಹ ಧ್ವಜವು ಇಲ್ಲವೇ ಇಲ್ಲ. ಮತ್ತು ಇಂದು ನಮ್ಮದೆಂದ ಸಿದ್ಧಗೊಳಿಸಿದ ಧ್ವಜದ ಅಪಮಾನವನ್ನು ಮಾಡಿದವರಿಗೆ ಶೀಕ್ಷೆಯನ್ನು ವಿಧಿಸುವ ಸಾಮರ್ಥ್ಯವು ನಮ್ಮಲ್ಲಿಲ್ಲ. ಪೂರ್ಣ ಸ್ವಾತಂತ್ರ್ಯವನ್ನು ದೊರಕಿಸಿದ ಬಳಿಕವೇ ನಮಗೆ ಈ ವಿಷಯದ ಯೋಗ್ಯ ವಿಚಾರವನ್ನು ಮಾಡಲು ಬರುವದು.

## ಮೂರನೆಯ ಪಾಠ

## ರಾಷ್ಟ್ರಧ್ವಜದ ಮೂಲ ಪೀಠಿಕೆಯು

ದುರ್ದೈವದಿಂದ ಸರ್ವಸ್ವೀ ಪರತಂತ್ರವಾದ ನಮ್ಮ ದೇಶಕ್ಕೆ ನಮ್ಮದೆನ್ನುವ ಧ್ವಜವಿಲ್ಲವೆಂಬದನ್ನು ನಾವು ಮೇಲೆ ಹೇಳಿದ್ದೇವಷ್ಟೇ? ಪರದಾಸ್ಯದಲ್ಲಿ ಬಂದಂದಿನಿಂದ ಬ್ರಿಟಿಷರ "ಯೂನಿಯನ್ನಜ್ಯಾಕಿ"ಗೆ ತಮ್ಮ ತಲೆಬೊಗ್ಗಿಸುವ ರೂಢಿಯು ಹಿಂದವಾಸೀಯರಿಗೆ ಬಿದ್ದು ಇಂದಿನ ವರೆಗೆ ಅದು ನಡೆದೇ ಇದೆ. ಇಷ್ಟೇಕೆ! ನಮ್ಮ ರಾಷ್ಟ್ರದ ಸ್ವಾತಂತ್ರ್ಯ ಸಂಪಾದನೆ ಗೋಸುಗ ನಾಲ್ವತ್ತೈದು (೪೫) ವರ್ಷಗಳ ವರೆಗೆ ಸತತ ಹೋರಾಡಿ ರಾಜಕಾರಣದಲ್ಲಿ ಅಗ್ರಪೂಜೆಯ ಬಹುಮಾನವನ್ನು ಪಡೆದ ಹಿಂದೀ ರಾಷ್ಟ್ರೀಯ ಮಹಾಸಭೆಯ ಮಂಡಪದ ಮೇಲೆ ಸಹ ೧೯೨೧ನೆಯ ಇಸವಿಯ ವರೆಗೆ ಯೂನಿಯನ್ನ ಜ್ಯಾಕವೇ ಹಾರಾಡುತ್ತಿತ್ತೆನ್ನಲು ಅಡ್ಡಿಯಿಲ್ಲ.

ಒಮ್ಮೆ ಜಪಾನೀ ಹಡಗದಲ್ಲಿ ಪ್ರವಾಸ ಮಾಡುತ್ತಿರುವ ಒಬ್ಬ ಹಿಂದೀ ಯುವಕನು ಡೆಕ್ಕದ ಮೇಲೆ ಅತ್ತಿತ್ತ ಅಡ್ಡಾಡುತ್ತಿರುವಾಗ, ಆತನನ್ನುದ್ದೇಶಿಸಿ ಹಡಗದ ಮೇಲೆ ಹಾರಾಡುವ ಧ್ವಜದ ಕಡೆಗೆ ಬೆರಳು ತೋರಿಸುತ್ತ ಅಭಿಮಾನಪೂರ್ವಕವಾಗಿ ಒಬ್ಬ ಜಪಾನೀ ಹುಡುಗನು "ನಿಮ್ಮ ದೇಶದ ಧ್ವಜವು ಇದೇ ಮಾದರಿಯದೋ?" ಎಂದು ಪ್ರಶ್ನಕೇಳಿದನು. ಕೂಡಲೆ ಹಿಂದೀ ಯುವಕನಿಗೆ ತನ್ನ ಪಾರತಂತ್ರ್ಯದ ಅರಿವು ಉಂಟಾಗಿ ಅವನ ಕಣ್ಣುಗಳಿಂದ ಅಶ್ರುಬಿಂದುಗಳು ಉದುರಹತ್ತಿದವು. ಅವನು ತನ್ನ ತಲೆಯನ್ನು ಕೆಳಗೆ ಬಗ್ಗಿಸಿದನು ಮತ್ತು ಸ್ವಸ್ಥ

ವಾಗಿ ನಿಂತನು. ಪರದೇಶದಲ್ಲಿ ಹೋದ ಹಿಂದೀ ಗೃಹಸ್ಥರಿಗೆ ಸ್ವತಂತ್ರ ದೇಶದ ಜನರು ಇಂತಹ ಪ್ರಶ್ನಗಳನ್ನು ಮೇಲಿಂದಮೇಲೆ ಕೇಳುತ್ತಾರೆ.ಮತ್ತು ಸ್ವಾತಂತ್ರ್ಯದ ಮಹತ್ವವನ್ನರಿತ ನಮ್ಮ ಹಿಂದೀ ತರುಣರಿಗೆ ಆ ಪ್ರಶ್ನೆಗೆ ಉತ್ತರ ಕೊಡಲು ಬಿಗಿಯಾಗುತ್ತದೆ. ಆದುದರಿಂದಲೇ ಶಿಕ್ಷಣಕ್ಕೆಂದು ವಿದೇಶಕ್ಕೆ ಹೋಗಿ ಸ್ವಾತಂತ್ರ್ಯದ ವಾತಾವರಣದಲ್ಲಿ ಅಲೆದಾಡುತ್ತಿದ್ದ ಹಿಂದೀ ಯುವಕರ ಮನಸ್ಸಿನಲ್ಲಿ ನಮ್ಮ ಭರತಭೂಮಿಗಾದರೂ ಒಂದು ಧ್ವಜವಿರಬೇಕೆಂಬ ಕಲ್ಪನೆಯು ಬರಹತ್ತಿತು.

೧೯೦೫ನೆಯ ಇಸ್ವಿಯ ಸುಮಾರಿಗೆ ಕೆಲವು ಹಿಂದೀದೇಶಭಕ್ತರು ಪ್ಯಾರಿಸದಲ್ಲಿ ಸೂರ್ಯ, ಚಂದ್ರ ಮತ್ತು ಕಮಲಗಳಿಂದ ಯುಕ್ತವಾದ ಒಂದು ಧ್ವಜವನ್ನು ಸಿದ್ಧಗೊಳಿಸಿ ಅದಕ್ಕೆ "ಹಿಂದೀ ರಾಷ್ಟ್ರಧ್ವಜ"ವೆಂಬ ಸಂಜ್ಞೆಯನ್ನು ಕೊಟ್ಟರು. ಹೀಗಿದ್ದರೂ "ಯೂನಿಯನ್ನ ಜ್ಯಾಕ" ದ ಹೊರತು ಬೇರೊಂದು ಧ್ವಜದ ಕಲ್ಪನೆಯೇ ಇರದ ಮುಂದಾಳುಗಳಿಂದಲೂ, ಕುಂಭಕರ್ಣಾವಸ್ಥೆಯಲ್ಲಿದ್ದ ಜನತೆಯಿಂದಲೂ ಈ ಬಗೆಯ ಪ್ರಯತ್ನಕ್ಕೆ ಯೋಗ್ಯವಾದ ಬೆಂಬಲವು ದೊರೆಯದೆ ಹೋಯಿತು.

ಆ ಮೇಲೆ ಹಿಂದೀ ತರುಣ ವರ್ಗವು ಆವೇಶದಿಂದ ಮುಂದೆ ಬಂದು ರಾಜಕಾರಣದಲ್ಲಿ ಭಾಗ ವಹಿಸಲು ಪ್ರಾರಂಭಿಸಿದರು. ಹಿಂದೂ ದೇಶವು ಸ್ವತಂತ್ರವಾಗಲೇಬೇಕು ಅದಕ್ಕೆ ಒಂದು ಸ್ವತಂತ್ರ ಧ್ವಜವಿರಲೇಬೇಕೆಂದು ಅವರಿಗೆ ಅನಿಸಹತ್ತಿತು. ಆದ್ದರಿಂದ ಅವರು, ತಮ್ಮ ದೃಷ್ಟಿಗೆ ಯೋಗ್ಯ ಕಂಡಂತೆ ರಾಷ್ಟ್ರಧ್ವಜದ ರೂಪವನ್ನು ನಿಶ್ಚಯಿಸಲು ಪ್ರಯ

ತ್ತಿ ಸಹತ್ತಿದರು. ಆದರೂ ತರುಣ ವರ್ಗದ ಈ ವಿಧದ ಸಾಹಸ
ಗಳಿಗೆ ಮುಂದಾಳುಗಳು ಯೋಗ್ಯ ಪ್ರೋತ್ಸಾಹಸವನ್ನು ಕೊಡ
ಲಿಲ್ಲ. ಆದರೂ ಕೆಲವು ಹಳೆಯ ಮುಂದಾಳುಗಳಿಗೆ ಮಾತ್ರ
ರಾಷ್ಟ್ರೀಯ ಧ್ವಜದ ಆವಶ್ಯಕತೆಯು ತೋರಿಬರಹತ್ತಿತು.
ಸನ್ ೧೯೧೬ರ ಸುಮಾರಿಗೆ "ಇಂಡಿಯನ್ ಹೋಮರೂಲ"
ಅರ್ಥಾತ್ ಹಿಂದೀ ಸ್ವರಾಜ್ಯದ ಚಳವಳಿಯು ಪ್ರಾರಂಭವಾದ
ಬಳಿಕ ಕೆಲವು ಕಾರ್ಯಕರ್ತರು ಕೆಂಪು ಬಿಳಿಬಣ್ಣದ ಒಂಬತ್ತು
ಪಟ್ಟಿಗಳುಳ್ಳ ಧ್ವಜವೊಂದನ್ನು ಸಿದ್ಧಗೊಳಿಸಿ ಅದರ ಕೆಳಬದಿಗೆ
ಸಪ್ತಋಷಿಗಳನ್ನೂ ಮೇಲಿನ ಎಡಮೂಲೆಯಲ್ಲಿ "ಯೂನಿಯನ್ನ
ಜ್ಯಾಕ" ನ್ನೂ ಬಲಮೂಲೆಯಲ್ಲಿ ಅರ್ಧ ಚಂದ್ರನನ್ನೂ ಮತ್ತು
ಅದರ ಮೇಲೆ ಒಂದು ಚಿಕ್ಕೆಯನ್ನೂ ಚಿತ್ರಿಸಿ ಸಿದ್ಧಪಡಿಸಿದರು.
ಆದರೆ ಅದರಲ್ಲಿಯೂ ಯೂನಿಯನ್ನ ಜ್ಯಾಕಿಗೆ ಪ್ರಾಧಾನ್ಯವನ್ನು
ಕೊಟ್ಟಿದ್ದರಿಂದ ಆ ಧ್ವಜಕ್ಕೆ ಮುಂದರಿದ ತರುಣ ದೇಶಭಕ್ತರು
ಮಾನವನ್ನು ಕೊಡಲಿಲ್ಲ.

ಈ ಬಗೆಯಾಗಿ ಅನೇಕ ವರ್ಷಗಳಿಂದ ಪ್ರಯತ್ನಗಳು
ನಡೆದಿರಲು ೧೯೨೧ನೆಯ ಅಸಹಕಾರತೆಯ ಚಳವಳಿಯ
ಕಾಲಕ್ಕೆ ಮಾರ್ಚ ತಿಂಗಳಲ್ಲಿ ಬಿಝುವಾಡದೊಳಗೆ ಕೂಡಿದ
"ಅಖಿಲಭಾರತ ಕಾಂಗ್ರೆಸ ಕಮಿಟಿ"ಯ ಅಧಿವೇಶನದ
ಕಾಲಕ್ಕೆ ಈಪ್ರಶ್ನೆಗೆ ಸಾಕಷ್ಟು ಹೆಚ್ಚು ಸಂಚಾಲನವು ಸಿಕ್ಕಿತು.
ಆ ಕಾಲಕ್ಕೆ ಒಬ್ಬ ಆಂಧ್ರ ತರುಣನು ಬೇರೆ ಬೇರೆ ಮಾದರಿಯ
ಧ್ವಜಗಳನ್ನು ಸಿದ್ಧಗೊಳಿಸಿ ಅವುಗಳನ್ನು ಮಹಾತ್ಮಾಗಾಂಧಿ
ಯವರ ಮುಂದೆ ಇಟ್ಟನು. ಅದರಲ್ಲಿ ಮಹಾತ್ಮರಿಗೆ ಯಾವ
ಧ್ವಜವೂ ರುಚಿಸದೆ ಸುಲಭವಾದ ಮತ್ತೊಂದು ಮಾದರಿಯ

ಧ್ವಜವನ್ನು ಸಿದ್ಧಪಡಿಸಲಿಕ್ಕೆ ಅವರು ಆಜ್ಞೆ ಮಾಡಿದರು. ಆಗ್ಗೆ ಹಿಂದುಗಳಿಗಾಗಿ ಕೆಂಪು ಹಾಗು ಮುಸಲ್ಮಾನರಿಗಾಗಿ ಹಸರು ಈ ಪ್ರಕಾರವಾಗಿ ಎರಡು ಬಣ್ಣದಿಂದ ಯುಕ್ತವಾದ ಧ್ವಜವನ್ನು ನಿರ್ಮಿಸಿ ಮಹಾತ್ಮಾಜಿಯವರಿಗೆ ತೋರಿಸಲಾಯಿತು. ಮಹಾತ್ಮರು ಇತರ ಎಲ್ಲ ಜಾತಿಗಳ ನಿದರ್ಶನವೆಂದು ಇವೆರಡು ಬಣ್ಣಗಳ ಬದಿಯಲ್ಲಿ ಬಿಳಿ ಬಣ್ಣವೊಂದನ್ನು ಜೋಡಿಸಲು ಹೇಳಿದರು. ಮತ್ತು ಈ ಮೂರು ಬಣ್ಣಗಳ ಮೇಲೆ " ಸುದರ್ಶನ ಚಕ್ರ " ವೆಂದೆನಿಸಿದ ರಾಟಿಯನ್ನು ಚಿತ್ರಿಸಲೂ ಹೇಳಿದರು. ನೂಲುವ ಉದ್ಯೋಗ ಹಾಗು ಇತರ ಕೈಗಾರಿಕೆಯ ವ್ಯವಸಾಯದ ಬಲದಿಂದಲೇ ಒಂದಾನೊಂದು ಕಾಲಕ್ಕೆ ನಮ್ಮ ದೇಶವು ವೈಭವದ ಶಿಖರಕ್ಕೆ ಏರಿತ್ತು ಮತ್ತು ಆ ವ್ಯವಸಾಯಗಳ ನಾಶದಿಂದಲೇ ಅದಕ್ಕೆ ಸಧ್ಯದ ದೈನ್ಯಾವಸ್ಥೆಯು ಪ್ರಾಪ್ತವಾಯಿತು. ಆದ್ದರಿಂದಲೇ ಧ್ವಜದ ಮೇಲೆ ರಾಟಿಯನ್ನು ಚಿತ್ರಿಸುವುದು ಒಳ್ಳೇ ಸಮಯೋಚಿತವೆಂದು ತೋರಿಬಂತು.

ಈ ರೀತಿಯಾಗಿ ಸಧ್ಯದ ನಮ್ಮ ಮೂರು ಬಣ್ಣದ ರಾಷ್ಟ್ರಧ್ವಜದ ಜನ್ಮವಾಯಿತು. ಈ ಧ್ವಜಕ್ಕೆ ರಾಷ್ಟ್ರೀಯ ಸಭೆಯು ಯೋಗ್ಯವಾದ ಒಂದು ಗೊತ್ತುವಳಿಯ ರೂಪದಿಂದ ಮಾನ್ಯತೆಯನ್ನುಕೊಡದಿದ್ದರೂ ಅದರ ಜನ್ಮದಾರಭ್ಯ "ಕಾಂಗ್ರೆಸ ಧ್ವಜ–ರಾಷ್ಟ್ರಧ್ವಜ,, ವೆಂದು ಎಲ್ಲೆಡೆಯಲ್ಲಿಯೂ ಅದು ಮನ್ನಿಸಲ್ಪಡಹತ್ತಿತ್ತು. ೧೯೨೧ನೆಯ ಇಸ್ವಿಯಲ್ಲಿ ಅಹಮದಾಬಾದಿನಲ್ಲಿ ಕೂಡಿದ ಕಾಂಗ್ರೆಸ ಅಧಿವೇಶನದಿಂದ ಕಾಂಗ್ರೆಸದ ಮುಖ್ಯ ಮಂಟಪದ ಮೇಲೆಯೂ ಕಾಂಗ್ರೆಸ ನಗರದಲ್ಲಿಯೂ ಇದೇ ಧ್ವಜವು ಅಲೆದಾಡುತ್ತ ಬಂದಿರುವದು. ಅಂದಿನಿಂದ

ರಾಷ್ಟ್ರೀಯ ವೃತ್ತಿಯ ಎಲ್ಲ ಸಂಸ್ಥೆಗಳೊಳಗಿಂದ " ಯೂನಿಯನ್ನ ಜ್ಯಾಕಿಗೆ" ಅರ್ಧಚಂದ್ರವು ಸಿಕ್ಕಿದೆಯೆಂದೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ.

ಇಂದಿನ ವರೆಗೆ ಸಾವಿರಾರು ದೇಶಭಕ್ತರು ಈ ರಾಷ್ಟ್ರ ಧ್ವಜದ ಮಾನರಕ್ಷಣೆಗಾಗಿ ಕಾರಾಗ್ರುಹವಾಸವನ್ನು ನಾನಾ ತರಹದ ಕಷ್ಟಗಳನ್ನು ಅನುಭವಿಸುತ್ತಿರುವದು ಸರ್ವರಿಗೆ ಗೊತ್ತಿದ್ದ ಮಾತೇ ಇದೆ.

## ನಾಲ್ಕನೆಯ ಪಾಠ

## ರಾಷ್ಟ್ರಧ್ವಜವು ಜಾತಿ ನಿದರ್ಶಕವಲ್ಲ

ಧ್ವಜದಲ್ಲಿ ಜಾತಿವಿಷಯಕವಾದುದೂ, ಪಂಥ ನಿದರ್ಶಕವೂ ಹಾಗು ಪಕ್ಷಗಳಲ್ಲಿಯ ಭೇದ ಸೂಚಕವೂ ಮುಂತಾದ ದ್ದೇನೂ ಇರುವುದಿಲ್ಲ. ಎಲ್ಲ ಧರ್ಮದವರೂ ಜಾತಿಯವರೂ, ತಮ್ಮತಮ್ಮಲ್ಲಿಯ ಭೇದಗಳನ್ನು ಮರೆತು ರಾಷ್ಟ್ರೀಯತ್ವದ ಭಾವನೆಯಿಂದ ರಾಷ್ಟ್ರಧ್ವಜದ ಕೆಳಗೆ ಒಂದುಗೂಡಬೇಕು.

ಆದರೂ ನಮ್ಮ ಧ್ವಜದ ಕಲ್ಪನೆಯು ಮೊದಲು ತಲೆದೋರಿದ ಕಾಲಕ್ಕೆ ಅದರ ಬುಡದಲ್ಲಿ ಜಾತಿ ಧರ್ಮಗಳ ಕಿಂಚಿತ್ ಸಂಬಧವಿತ್ತೆನ್ನಬಹುದು. ಆದರೆ ಮುಂದೆ ರಾಷ್ಟ್ರೀಯ ಚಳವಳಿಯು ಒಳ್ಳೇ ಭರದಿಂದ ನಡೆದುದರಿಂದ ಜಾತಿವಿಷಯಕ ಭೇದಗಳಿಗೆ ಪ್ರಾಧಾನ್ಯವನ್ನು ಕೊಡಲು ಯಾರಿಗೂ ಅವಸರವಿದ್ದಿಲ್ಲ. ಮುಂದೆ ಚಳವಳಿಯು ಹಿಮ್ಮೆಟ್ಟಿದ ಬಳಿಕ ಜಾತಿವಿಷಯಕ ಭೇದಗಳು ತಲೆದೋರಹತ್ತಿ ಧ್ವಜದಲ್ಲಿ ಬಣ್ಣಗಳ ವಿಷಯವಾಗಿ ಭಿನ್ನ ಭಿನ್ನ ಜಾತಿಗಳಲ್ಲಿ ಭೇದಭಾವವು ಉತ್ಪನ್ನವಾಗಹತ್ತಿತು. ಸಧ್ಯಕ್ಕಿರುವ ಮೂರು ಬಣ್ಣಗಳ ಜೋಡಿಯಲ್ಲಿಯೇ ಸೀಖಸಮಾಜದವರ ಸಲುವಾಗಿ ಮತ್ತೊಂದು ಬಣ್ಣವನ್ನು ಜೋಡಿಸಬೇಕೆಂದು ಆ ಸಮಾಜದ ಮುಂದಾಳುಗಳು ಕಾಂಗ್ರೆಸದವರಿಗೆ ವಿನಂತಿಮಾಡುತ್ತ ಬಂದರು. ಆದರೆ ಕಾಂಗ್ರೆಸದವರು ಅತ್ತಕಡೆಗೆ ವಿಶೇಷವಾಗಿ ಲಕ್ಷಕೊಡಲಿಲ್ಲ. ಹೀಗಿದ್ದರೂ ಕೆಲವೆಡೆಗಳಲ್ಲಿ ಮೂಬಣ್ಣದ ಬದಲು ನಾಲ್ಕು ಬಣ್ಣದ ಧ್ವಜವನ್ನು ಸಿದ್ಧಗೊಳಿಸಿ ಅದನ್ನೇ ರಾಷ್ಟ್ರೀಯ ಧ್ವಜವೆಂದು ಮನ್ನಿಸಲಿಕ್ಕೆ ಸೀಖಜನರು ಪ್ರಾರಂಭಿಸಿದ್ದಾರೆ.

ಆದರೂ ಈ ಮೂಬಣ್ಣದ ಧ್ವಜದ ಬಣ್ಣಗಳ ವಿಷಯಕ ವಾದ ಜಾತಿ ಸೂಚಕ ಕಲ್ಪನೆಯು ಪಲ್ಲಟಸಹತ್ತಿ ನಮ್ಮ ಧ್ವಜವು ರಾಷ್ಟ್ರೀಯತ್ವದ ಪ್ರತೀಕವೇ ಆಗಿದೆಯೆಂಬ ತಿಳು ವಳಿಕೆಯು ಈಗೀಗ ರೂಢವಾಗಹತ್ತಿದೆ. ನಮ್ಮ ಧ್ವಜದ ಮೂರು ಬಣ್ಣಗಳು ಸ್ವಾತಂತ್ರ್ಯ, ಸಮತೆ ಮತ್ತು ಬಂಧುಭಾವ ಗಳ ನಿದರ್ಶಕವಾಗಿವೆಯೆಂದು ಕೆಲವು ಮುಂದಾಳುಗಳ ಮತವು.

ಆದರೆ ೧೯೩೧ನೆಯ ಇಸವಿಯ ಫೆಬ್ರುವರಿ ತಿಂಗಳಲ್ಲಿ ಕೂಡಿದ "ಕಾರ್ಯಕಾರಿ ಮಂಡಲದ ಸಭೆಯನಂತರ ಮಹಾತ್ಮಾ ಗಾಂಧಿಯವರು ಫೆಬ್ರುವರಿ ೨೬ನೆಯ ತಾರೀಖಿನ "ಯಂಗ ಇಂಡಿಯಾ" ಪತ್ರಿಕೆಯಲ್ಲಿ ಧ್ವಜದ ಮೂರು ಬಣ್ಣಗಳ ವಿಷ ಯವಾಗಿ ಮಾಡಿದ ಸ್ಪಷ್ಟೀಕರಣವು ಅತ್ಯಂತ ಸಮರ್ಪಕ ವಾಗಿದೆ. ಕೆಂಪು ಬಣ್ಣವು ಶೌರ್ಯದ ದರ್ಶಕವಿದ್ದು ಹಸರು ಮತ್ತು ಕೆಂಪುಬಣ್ಣಗಳು ಅನುಕ್ರಮವಾಗಿ ಶಾಂತತೆ ಮತ್ತು ಪಾವಿತ್ರ್ಯವನ್ನು ಸೂಚಿಸುತ್ತವೆಯೆಂದು ಅವರ ಅಭಿಪ್ರಾಯವು. ಅರ್ಥಾತ್ ಭಾರತೀಯ ರಾಷ್ಟ್ರಧ್ವಜವು, ಶೌರ್ಯ, ಶಾಂತತೆ, ಮತ್ತು ಪಾವಿತ್ರ್ಯವೆಂಬೀ ಮೂರು ಗುಣಗಳ ಕೇವಲ ಪ್ರತೀಕ ವೆಂದೇ ಮಹಾತ್ಮಾಜಿಯವರ ಮತವಿದ್ದು ಆ ಮತವನ್ನೇ ಇಂದು ಇಡೀ ರಾಷ್ಟ್ರವು ಎತ್ತಿಹಿಡಿಯುತ್ತಲಿದೆ.

ಧ್ವಜದ ಮೇಲಿರುವ ರಾಷ್ಟ್ರೀಯ ವಿಷಯವಾಗಿ ಮಹಾತ್ಮಾಜಿಯವರು ಹೀಗೆನ್ನುತ್ತಾರೆ. "ರಾಷ್ಟ್ರೀಯ ಚಿನ್ಹದ ವಿಷಯವಾಗಿ ಯಾರಾದರೂ ಆಕ್ಷೇಪಿಸಿದರೆ ನನಗೆ ಕೆಡಕೆನಿಸುವದು. ರಾಟೆಯು ಬಡವರನ್ನೂ ಶ್ರೀಮಂತರನ್ನೂ

ಒಟ್ಟುಗೂಡಿಸುವ ಮಹಾಶಕ್ತಿಯು ; ಮತ್ತು ಬಹುಜನ ಸಮಾಜವನ್ನು ಮರೆತು ಮಾಡುವ ಕಾರ್ಯಗಳೆಲ್ಲ ನಿರರ್ಥಕ ವೆಂಬುದನ್ನು ಪುನಃ ಪುನಃ ರಾಷ್ಟ್ರೀಯ ಕೆಲಸಗಾರರಿಗೆ ನೆನಪು ಮಾಡಿ ಕೊಡುವ ಕುರುಹೆಂದರೆ ಈ ರಾಟೆಯು."

ಅಂದ ಬಳಿಕ ರಾಷ್ಟ್ರಧ್ವಜದ ಮೇಲಿನ ಬಣ್ಣಗಳು ವಿವಿಧ ಧರ್ಮ, ಜಾತಿ, ಸಾಮಾಜಿಕ ಇಲ್ಲವೆ ರಾಜಕೀಯ ಪಂಥಗಳ ನಿದರ್ಶಕವಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ಮತ್ತು ಇಂತಹ ತಪ್ಪು ತಿಳಿವಳಿಕೆಯು ಎರಡನೆಯವರಿಗಾಗಿದ್ದರೆ ಅದನ್ನು ನಿರ್ಮೂಲ ಮಾಡುವುದು ಪ್ರತಿಯೊಬ್ಬ ಹಿಂದ ವಾಸಿಯ ಕರ್ತವ್ಯವು.

## ಐದನೆಯ ಪಾಠ

## ರಾಷ್ಟ್ರಧ್ವಜವು ಹೇಗಿರಬೇಕು?

ಯಾವುದೇ ಆಕಾರದ ಅಥವಾ ಯಾವುದೇ ಬಣ್ಣದ ಧ್ವಜಕ್ಕೆ ರಾಷ್ಟ್ರಧ್ವಜವೆಂದೆನ್ನಲಾಗದು. ಹಿಂದೀ ರಾಷ್ಟ್ರಕ್ಕೆ ಸಮ್ಮತವಾದ ಧ್ವಜದಲ್ಲಿ ಮೇಲಿನಿಂದ ಕೆಳಕ್ಕೆ ಅನುಕ್ರಮವಾಗಿ ಬಿಳಿ, ಹಸರು, ಮತ್ತು ಕೆಂಪು ಈ ಮೂರು ಬಣ್ಣಗಳಿರುವವು. ಮತ್ತು ಅವುಗಳ ಮೇಲೆ ರಾಟಿಯ ಚಿತ್ರವನ್ನು ತೆಗೆದಿರುವರು. ರಾಟಿಯ ಕದಿರು ಧ್ವಜಸ್ತಂಭದ ಬದಿಗೆ ಇರುತ್ತದೆ. ಮತ್ತು ರಾಟಿಯ ಗಾಲಿಯು ಧ್ವಜದ, ಹವೆಯಲ್ಲಿ ಹಾರಾಡುವ ಭಾಗ ದಲ್ಲಿ ಇರುತ್ತದೆ. ಇದರ ಹೊರತು ಧ್ವಜದ ಮೇಲೆ ಯಾವುದೇ ಎರಡನೆಯ ಚಿನ್ಹವಾಗಲಿ, ಅಕ್ಷರವಾಗಲಿ ಇರಕೂಡದು.

(ಮುಖಪೃಷ್ಠದ ಮೇಲಿನ ಬಣ್ಣದ ಚಿತ್ರವನ್ನು ನೋಡಿರಿ.)

ಧ್ವಜದ ಉದ್ದಳತೆಯು (ಅಂದರೆ ಭೂಮಿಗೆ ಸಮಾಂ ತರವಾಗಿರುವ ಇದಕ್ಕೆ ಇಂಗ್ರೇಜಿಯಲ್ಲಿ Fly ಫ್ಲಾಯ್ ಎಂದೆ ನ್ನುವರು) ಮತ್ತು ಅಗಲಳತೆಯು (ಧ್ವಜಸ್ತಂಭಕ್ಕೆ ಸಮಾಂ ತರವಾಗಿರುವ ಭಾಗವು ಇದಕ್ಕೆ ಇಂಗ್ರೇಜಿಯಲ್ಲಿ Hoist ಹಾಯಿಸ್ಟ ಎಂದೆನ್ನುವರು.) ಇವುಗಳ ಪ್ರಮಾಣವು ಎರ ಡಕ್ಕೆ ಮೂರರಂತೆ ಇರಬೇಕು. ಅಂದರೆ ಉದ್ದಳತೆಯು ೩ ಫೂಟುಗಳಿದ್ದರೆ ಅಗಲಳತೆಯು ೬ ಫೂಟು ಇರಬೇಕು ಅಥವಾ ಉದ್ದಳತೆಯು ೩ ಇಂಚುಗಳಿದ್ದರೆ ಅಗಲಳತೆಯು ೬ ಇಂಚುಗಳಿರಬೇಕು. ಸಣ್ಣ ದೊಡ್ಡ ಧ್ವಜಗಳನ್ನು ಸಿದ್ಧ ಗೊಳಿಸುವಾಗಲೂ ಇದೇ ಪ್ರಮಾಣವನ್ನೇ ಅನುಸರಿಸಬೇಕು.

ಈಗ ಪೇಟೆಗಳಲ್ಲಿ ಬೇರೆ ಬೇರೆ ಬಣ್ಣಗಳ ಮತ್ತು ಅಂಕ ಡೊಂಕ ಆಕಾರದ ಧ್ವಜಗಳು ಕ್ರಯಕ್ಕೆ ಸಿಗುತ್ತವೆ. ಅವು ಗಳನ್ನು ಕೊಂಡು ರಾಷ್ಟ್ರಧ್ವಜವೆಂದು ಉಪಯೋಗಿಸುವದು ಯೋಗ್ಯವಲ್ಲ.

ವಂದನದ ಕಾಲಕ್ಕೆ ರಾಷ್ಟ್ರದ ಪ್ರತೀಕವೆಂದು ಉಪ ಯೋಗಿಸಲ್ಪಡುವ ಧ್ವಜದ ಅರಿವೆಯು ಕೈನೂಲಿನ ಶುದ್ಧ ಖಾದಿಯದಾಗಿರಬೇಕೆಂಬುದು ಲಕ್ಷ್ಯದಲ್ಲಿಡತಕ್ಕ ಎರಡ ನೆಯ ಮಾತು. ಯೋಗ್ಯತೆಗೆ ಅನುಸರಿಸಿ ಅದು ನೂಲಿನ ದಾಗಲಿ, ಉಣ್ಣೆಯದಾಗಲಿ, ಇಲ್ಲವೆ ರೇಶಿಮೆಯದಾಗಲಿ ಇದ್ದರೆ ನಡೆಯುವದು. ಆದರೆ ನೂಲು ಮಾತ್ರ ಕೈಯಿಂದ ತೆಗೆದುದೇ ಇರಬೇಕು. ಮತ್ತು ಉಣ್ಣೆಯಾಗಲೀ ಇಲ್ಲವೆ ರೇಶಿಮೆಯಾಗಲಿ ಶುದ್ಧ ಸ್ವದೇಶಿಯದಿರಬೇಕು.

## ಆರನೆಯ ಪಾಠ

## ಹಿಂದುಸ್ಥಾನೀ ಸೇವಾದಲವೂ ರಾಷ್ಟ್ರಧ್ವಜವೂ

ರಾಷ್ಟ್ರಧ್ವಜಕ್ಕೂ ಹಿಂದುಸ್ಥಾನಿ ಸೇವಾದಲಕ್ಕೂ ನಿಕಟವಾದ ಸಂಬಂಧವಿರುತ್ತದೆ. ೧೯೨೩ನೆಯ ಇಸವಿಯ ಏಪ್ರಿಲ ತಿಂಗಳಲ್ಲಿ ನಾಗಪೂರದಲ್ಲಿ ಧ್ವಜದ ಸತ್ಯಾಗ್ರಹವು ಪ್ರಾರಂಭವಾದಾಗ್ಗೆ ರಾಷ್ಟ್ರಧ್ವಜದ ಮಾನರಕ್ಷಣೆಗಾಗಿ ಕಾಂಗ್ರೆಸ್ಸಿನ ಕಾರ್ಯಕಾರೀ ಮಂಡಳದವರು ಪ್ರತಿಯೊಂದು ಪ್ರಾಂತದಿಂದಲೂ ಆರು ಜನ ಸ್ವಯಂಸೇವಕರನ್ನು ನಾಗಪೂರಕ್ಕೆ ಕಳಿಸುವ ವ್ಯವಸ್ಥೆಯನ್ನು ಮಾಡಿದ್ದರು. ಅವರು ಸತ್ಯಾಗ್ರಹವನ್ನಾಚರಿಸಿದ್ದರಿಂದ ಅವರಿಗೆ ಅಲ್ಲಿಯೇ ಕಾರಾಗೃಹವನ್ನು ಸೇರಬೇಕಾಯಿತು. ರಾಷ್ಟ್ರೀಯ ಧ್ವಜದ ಮಾನವನ್ನು ರಕ್ಷಿಸುವುದಕ್ಕಾಗಿಯೂ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿಯೂ ಪ್ರಾಣಕೊಡಲು ಸಹ ಸಿದ್ಧರಿದ್ದ ದೇಶಭಕ್ತರ ಅಖಿಲ ಭಾರತೀಯ ಸ್ವಯಂಸೇವಕರ ದಲವೊಂದು ಇರಬೇಕೆಂಬ ಕಲ್ಪನೆಯು ಆ ಕಾಲಕ್ಕೆ ನಾಗಪೂರ ಸೆರೆಮನೆಯಲ್ಲಿ ಶಿಕ್ಷೆಯನ್ನು ಭೋಗಿಸುತ್ತಿದ್ದ ಕೆಲವು ಸತ್ಯಾಗ್ರಹಿಮುಂದಾಳುಗಳ ಮನಸ್ಸಿನಲ್ಲಿ ಉತ್ಪನ್ನವಾಯಿತು. ಮತ್ತು ಅವರು ಅಲ್ಲಿಯೇ ಸೇವಾದಲದ ಸಂಘಟನೆಯ ಕಾರ್ಯವನ್ನು ಪ್ರಾರಂಭಿಸಿದರು.

ನಾಗಪೂರ ಸೆರೆಮನೆಯಿಂದ ಮುಕ್ತರಾದಕೂಡಲೆ ಕೊಕೊನಾಡದಲ್ಲಿ ಕೂಡಿದ ಕಾಂಗ್ರೆಸದ ಅಧಿವೇಶನದ ಕಾಲಕ್ಕೆ ಕೆಲವು ಸ್ವಯಂಸೇವಕರೂ ಅವರ ಮುಂದಾಳುಗಳೂ ಹೋಗಿದ್ದರು. ಮತ್ತು ಆಗ್ಗೆ ಅವರು ಹಿಂದುಸ್ಥಾನೀ ಸೇವಾದಲಕ್ಕೆ ಮೂರ್ತಸ್ವರೂಪವನ್ನು ಕೊಟ್ಟು ಅದನ್ನು ಸ್ಥಾಪಿಸಿ

ದರು. ಅದೇ ಸಮಯಕ್ಕೆ ರಾಷ್ಟ್ರೀಯ ಧ್ವಜವು ಕಾಂಗ್ರೆಸ ನಗರದಲ್ಲಿ ರಾಷ್ಟ್ರೀಯ ಸಭೆಯ ಅಧ್ಯಕ್ಷರ ಹಸ್ತದಿಂದ ಪ್ರಥಮತಃ ಏರಿಸಲ್ಪಟ್ಟಿತು. ಅಲ್ಲಿಯೇ ರಾಷ್ಟ್ರೀಯ ಸಭೆಯು, ಹಿಂದುಸ್ತಾನೀ ಸೇವಾದಲವು ತನ್ನದೇ ಸ್ವಯಂ ಸೇವಕದಲವೆಂದು ಮನ್ನಣೆಯನ್ನಿತ್ತಿತು. ಅಂದಿನಿಂದ ಧ್ವಜ ಸಂರಕ್ಷಣೆಯ ಹೊಣೆಗಾರಿಕೆಯು ಅರ್ಥಾತ್ ಹಿಂದುಸ್ತಾನೀ ಸೇವಾದಲವನ್ನೇ ಕೂಡಿತು.

ಮುಂದೆ ಬೆಳಗಾವಿಯಲ್ಲಿ ಕೂಡಿದ ರಾಷ್ಟ್ರೀಯ ಸಭೆಯ ಅಧಿವೇಶನದಿಂದ ಧ್ವಜಾಭಿವಂದನದ ವಿಧಿಯು ಕ್ರಮಬದ್ಧ ವಾಗಿ ಪ್ರಾರಂಭವಾಯಿತು. ಅಂದಿನಿಂದ (೧೯೨೮ನೆಯ ಇಸ ವಿಯ ಕಲಕತ್ತೆಯ ಅಧಿವೇಶನವೊಂದನ್ನುಳಿದು) ಪ್ರತಿವರ್ಷ ಕಾಂಗ್ರೆಸ್ಸಿನ ಅಧಿವೇಶನದ ಪೂರ್ವದಲ್ಲಿ ಈ ವಿಧಿಯನ್ನು ಹಿಂದುಸ್ತಾನೀ ಸೇವಾದಲದವರು ಒಳ್ಳೇ ಶಿಸ್ತಿನಿಂದಲೂ, ಗಂಭೀರತನದಿಂದಲೂ ಆಚರಿಸುತ್ತಿರುವರು. ರಾಷ್ಟ್ರಧ್ವಜದ ಲೋಕಪ್ರಿಯತೆಯನ್ನು ಎಲ್ಲೆಡೆಯಲ್ಲಿಯೂ ಹೆಚ್ಚಿಸಿದ ಶ್ರೇಯವು ಬಹ್ವಂಶದಿಂದ ಹಿಂದುಸ್ತಾನೀ ಸೇವಾದಲದ್ದೆಂದೇ ಹೇಳಬಹುದು. ಪ್ರತಿಯೊಂದು ತಿಂಗಳ ಕೊನೆಯ ರವಿವಾರ ಕ್ಕೊಮ್ಮೆ ಮುಂಜಾನೆ ಸರಿಯಾಗಿ ೮ ಘಂಟೆಗೆ ರಾಷ್ಟ್ರೀಯ ಧ್ವಜವಂದನೆಯ ವಿಧಿಯನ್ನು ಖಿಲ ಭರತಖಂಡದಲ್ಲೆಲ್ಲ ಆಚರಿಸಬೇಕೆಂಬ ಗೊತ್ತುವಳಿಯನ್ನು ೧೯೨೮ನೆಯ ಇಸವಿ ಯಲ್ಲಿ ಕೂಡಿದ ತಮ್ಮ ಪರಿಷತ್ತಿನಲ್ಲಿ, ಸೇವಾದಲದವರು ಸ್ವೀಕ ರಿಸಿದರು. ಮತ್ತು ಬೇರೆ ಬೇರೆ ಪ್ರಾಂತಿಕ, ಜಿಲ್ಹಾ, ಮತ್ತು ತಾಲೂಕ ಕಾಂಗ್ರೆಸ ಕಮೀಟಿಗಳೂ, ಸೇವಾದಲದ ಸಕಲ

ಶಾಖೆಗಳೂ, ಬೇರೆ ರಾಷ್ಟ್ರೀಯ ಸಂಸ್ಥೆಗಳೂ ಇದಕ್ಕೆ ಬೆಂಬ
ಲವನ್ನಿತ್ತು ತಮ್ಮ ತಮ್ಮ ಸ್ಥಳಗಳಲ್ಲಿ ಧ್ವಜವಂದನೆಯನ್ನು
ಪ್ರಾರಂಭಿಸಿದರು. ಕಾಂಗ್ರೆಸ್ಸಿನ ಪ್ರಮುಖ ಕಾರ್ಯದರ್ಶಿ
ಗಳೂ ಸೇವಾದಲದ ಈ ಗೊತ್ತುವಳಿಯನ್ನು ರಾಷ್ಟ್ರದಲ್ಲಿಯ
ಎಲ್ಲ ಸ್ತ್ರೀಪುರುಷರ ಲಕ್ಷ್ಯಕ್ಕೆ ತಂದು ಈ ವಿಧಿಯನ್ನು ಆಚರಿ
ಸಲು ಎಲ್ಲರಿಗೂ ವಿನಂತಿಮಾಡಿಕೊಂಡರು. ಆ ಮೇರೆಗೆ ಈ
ವಿಧಿಯು ಇಂದಿಗೆ ಸಾವಿರಾರು ಕಡೆಗಳಲ್ಲೆಲ್ಲ ಆಚರಿಸಲ್ಪಡು
ತ್ತಿದ್ದು ಅಗ್ಗೆ ಲಕ್ಷಾವಧಿ ಜನರು ಕೂಡುತ್ತಾರೆ. ಮತ್ತು ಈ
ಧ್ವಜಕ್ಕೆ ಪ್ರೇಮದಿಂದಲೂ ಅತ್ಯಂತ ಆದರದಿಂದಲೂ ವಂದಿ
ಸುತ್ತಾರೆ. ಪರದೇಶಗಳಲ್ಲಿ ಕೂಡ ಕೆಲವೆಡೆಗಳಲ್ಲಿ ನಮ್ಮ
ಜನರು ಧ್ವಜವಂದನೆಯ ಕಾರ್ಯಕ್ರಮವನ್ನು ಪಾರುಗಾಣಿ
ಸುವರು.

ರಾಷ್ಟ್ರೀಯ ಧ್ವಜದ ವಿಷಯವಾಗಿ ಜನರ ಮನಸ್ಸಿ
ನಲ್ಲಿ ಆದರವನ್ನೂ ಪ್ರೇಮವನ್ನೂ ಹುಟ್ಟಿಸಲು ಈ ಸಮಾರಂ
ಭವು ಹೆಚ್ಚಿಗೆ ಕಾರಣೀಭೂತವಾಗಿದೆ. ಅದೇ ಪ್ರಕಾರ ಅದ
ರಲ್ಲಿ ತೋರಿಬರುವ ಶಿಸ್ತು, ನಾವೀನ್ಯ, ಭವ್ಯತನ ಮುಂತಾದ
ಗುಣಗಳಿಂದಲೂ ಅದು ಲೋಕಪ್ರಿಯವಾಗಹತ್ತಿ ಅದರ
ಸಂಖ್ಯೆಯು ದಿನದಿನಕ್ಕೆ ಬೆಳೆಯಹತ್ತಿದೆ.

## ಏಳನೆಯ ಪಾಠ

## ವಂದನ ವಿಧಿಯ ಪೂರ್ವ ಸಿದ್ಧತೆಯು

ಧ್ವಜವನ್ನು ಏರಿಸಬೇಕೆಂದು ಗೊತ್ತು ಮಾಡಿದ ಸ್ಥಳವು ಸ್ವಚ್ಛವೂ, ಸಮವಾದುದೂ, ವಿಸ್ತೃತವೂ, ಸುರಕ್ಷಿತವೂ ಆಗಿರಬೇಕು. ಧ್ವಜಸ್ತಂಭವು ಅತ್ಯಂತ ಸುಂದರವಾದುದೂ, ನಿಡಿದಾದುದೂ ಇರಬೇಕು. ಅಂಕಡೊಂಕವೂ, ಕೊಳಕ ಮುರುಕವೂ ಆದ ಕೋಲನ್ನು ಸ್ತಂಭದ ಸಲುವಾಗಿ ಉಪಯೋಗಿಸಕೂಡದು. ಭಾರವೂ ಸರಳವೂ ಆದ ಒಂದು ಗಟ್ಟಿಯಾದ ಕೋಲನ್ನು ತೆಗೆದುಕೊಂಡು ನುಣುಪಾಗುವಂತೆ ಅದನ್ನು ಕೆತ್ತಬೇಕು. ಸ್ತಂಭದ ಎತ್ತರದ ಪ್ರಮಾಣವು ಬಹಳವಿರದಿದ್ದರೆ ಎರಡು ಇಲ್ಲವೆ ಮೂರು ಕೋಲುಗಳನ್ನು ತೆಗೆದುಕೊಂಡು ಒಂದರಲ್ಲೊಂದು ಚೆನ್ನಾಗಿ ಸೇರಿಸಿ ಮೇಲೆ ಬಿಳಿ ಬಣ್ಣವನ್ನು ಲೇಪಿಸಬೇಕು.

ಧ್ವಜವು ಸ್ತಂಭದ ಎತ್ತರಕ್ಕೆ ಶೋಭಿಸುವ ಅಳತೆಯದೇ ಇರಬೇಕು. ಸಾಧಾರಣವಾಗಿ ೪ ಫೂಟು ಉದ್ದ ಮತ್ತು ೬ ಫೂಟು ಅಗಲವಾಗಿರುವ ಧ್ವಜಕ್ಕೋಸುಗ ನೆಲದಿಂದ ೨೫ ರಿಂದ ೪೦ ಫೂಟು ಎತ್ತರವಾಗಿರುವ ಸ್ತಂಭವು ಬೇಕಾಗುವುದು. ಧ್ವಜವು ೬ ಫೂಟು ಉದ್ದ ಮತ್ತು ೯ ಫೂಟು ಅಗಲವಾಗಿದ್ದರೆ ಸ್ತಂಭವು ೪೦ ರಿಂದ ೭೫ ಫೂಟು ಎತ್ತರವಾಗಿದ್ದರೆ ಶೋಭಿಸುವುದು. ಇದೇ ಪ್ರಮಾಣದಿಂದ ನಮಗೆ ಬೇಕಾಗುವ ಸ್ತಂಭದ ಎತ್ತರವನ್ನು ಗೊತ್ತುಹಚ್ಚಬೇಕು. ಧ್ವಜದ ಗಾಲಿಯೂ ನುಲಿಯೂ ಕೂಡ ಗಟ್ಟಿಯಾಗಿರಬೇಕು. ಸ್ತಂಭದ

ಮೇಲ್ಬದಿಗೆ ಕಟ್ಟಿಗೆಯ ಇಲ್ಲವೆ ಕಬ್ಬಿಣದ ಗಾಲಿಯನ್ನು ಮೊದಲೇ ಕೂಡ್ರಿಸಿಕೊಂಡಿರಬೇಕು. ಮತ್ತು ಸ್ತಂಭವನ್ನು ನಿಲ್ಲಿಸುವ ಮೊದಲೇ ಗಾಲಿಯ ಮೇಲೆ ನುಲಿಯನ್ನು ಹಾಕಿರಬೇಕು. ನುಲಿಯು ಮೇಲಿಂದಮೇಲೆ ಗಾಲಿಯೊಳಗಿಂದ ನುಸುಳಿ ಬೀಳುವ ಭೀತಿಯು ಬಹಳವಿರುವದರಿಂದ ನುಲಿಯ ಪಿಂಡವು ಗಾಲಿಯ ಹರಿಗಿಂತ ಹೆಚ್ಚಾಗಿರಕೂಡದು. ನುಲಿಯು ಬಿಳಿಯ ನೂಲಿನದೇ ಇರಬೇಕಲ್ಲದೆ ಇನ್ನಾವುದೂ ಇರಕೂಡದು.

ಸ್ತಂಭದ ಸರಾಸರಿ ೧/೫ ದಷ್ಟು ಭಾಗವು ನೆಲದಲ್ಲಿ ಪೂರ್ಣವಾಗಿ ಹೋಗಿದ್ದಿರಬೇಕು. ಸ್ತಂಭವು ಬಹಳ ಎತ್ತರವಾಗಿದ್ದರೆ ಅದಕ್ಕೆ ಎರಡು ಬೇರೆ ಬೇರೆ ಸ್ಥಳಗಳಲ್ಲಿ ಮೂರು ಮೂರು ಸಣಬುಗಳಿಂದ ಗಟ್ಟಿಯಾಗಿ ಬಿಗಿದು ಅದು ಗಾಳಿಯಿಂದ ಹೊಯ್ದಾಡಿ ಬೀಳದಂತೆ ವ್ಯವಸ್ಥೆಯನ್ನು ಮಾಡಬೇಕು. ಧ್ವಜಸ್ತಂಭವನ್ನು ಸ್ಥಿರವಾಗಿ ಕಡೆತನಕ ನಿಲ್ಲಿಸಬೇಕೆಂದು ಗೊತ್ತಾದ ಸ್ಥಳದಲ್ಲಿ ಸ್ತಂಭದ ಸುತ್ತಲೂ ೪-೬ ಫೂಟು ಎತ್ತರದ ಗಟ್ಟಿಯಾದ ಕಟ್ಟೆಯು ಇರಬೇಕು.

ಧ್ವಜಸ್ತಂಭದ ಬಿಂದುವಿನಿಂದ ಹಿಮ್ಮೈಗೆ ೬ ಫೂಟು ಅಂತರದ ಮೇಲೆ ಒಂದು ಉದ್ದಗೆರೆಯನ್ನು ಹೊಡೆಯಬೇಕು. ಮತ್ತು ಧ್ವಜಸ್ತಂಭ ಬಿಂದುವಿನಿಂದ ಒಂದು ಸರಳ ರೇಖೆಯನ್ನು ತೆಗೆದು ಮೇಲಿನ ಉದ್ದಗೆರೆಯನ್ನು ಸರಿಯಾಗಿ ಇಬ್ಭಾಗಿಸಬೇಕು. ಈ ಅಡ್ಡಗೆರೆಯು ಉದ್ದ ಗೆರೆಯನ್ನು ಛೇದಿಸುವ ಸ್ಥಳವೇ ಅಧ್ಯಕ್ಷರು ನಿಲ್ಲುವ ಸ್ಥಳವೆಂದು ತಿಳಿಯಬೇಕು. ಸ್ತಂಭ ಬಿಂದುವೇ ಧ್ವಜವಂದನೆಯ ವಿಧಿ ಕ್ಷೇತ್ರದ ಮಧ್ಯ

ಬಿಂದುವೆಂದು ತಿಳಿದು ಉದ್ದಗೆರೆಯನ್ನು ಎರಡೂ ಬದಿಗೆ ಮುಟ್ಟುವವರೆಗೆ ಧ್ವಜಸ್ತಂಭದ ಸುತ್ತಲೂ ಒಂದು ವರ್ತುಳ ವನ್ನು ತೆಗೆಯಬೇಕು. ಈ ವರ್ತುಳವು ಉದ್ದ ಗೆರೆಯನ್ನು ದಾಟಿ ಕೆಳಗೆ ಬರಕೂಡದು. ಈ ವರ್ತುಳದ ಆಕಾರವು ಕುದುರೆಯ ನಾಲಿನಂತೆ ಕಾಣುವದು. ಈ ವರ್ತುಳದ ಸುತ್ತಲೂ ನಾಲ್ಕು ನಾಲ್ಕು ಫೂಟು ಅಂತರದ ಮೇಲೆ ಬೇಕಾ ದಷ್ಟು ಸಮಾಂತರ ವರ್ತುಳಗಳನ್ನು ತೆಗೆಯಬೇಕು.

ಉದ್ದಗೆರೆಯ ಮಧ್ಯ ಬಿಂದುವಿನ ಮೇಲೆ ಅಂದರೆ ಸ್ತಂಭದ ಬಿಂದುವಿನ ಹಿಂದೆ ಸರಿಯಾಗಿ ೬ ಫೂಟಿನ ಮೇಲೆ ಮಧ್ಯಭಾಗದಲ್ಲಿ ಅಧ್ಯಕ್ಷರ ಸ್ಥಳವಿರಬೇಕು. ಈ ಸ್ಥಳದ ಹಿಂದೆ ಎರಡು ಫೂಟಿನ ಮೇಲೆ ಅಧಕ್ಷರ ಎಡಕ್ಕೂ ಬಲಕ್ಕೂ ಶಿಬಿರಾಧಿಪತಿ ಮತ್ತು ಸೇನಾಪತಿಗಳ ಸ್ಥಳಗಳಿರುತ್ತವೆ. ಧ್ವಜಸ್ತಂಭದ ಗೆರೆಯಲ್ಲಿ ಬಲಪಕ್ಷಕ್ಕೆ ಆರು ಫೂಟು ಸ್ಥಳವನ್ನು ಬಿಟ್ಟು ಬ್ಯುಗಿಲವನ್ನೂದುವವನು ನಿಲ್ಲಬೇಕು. ಸ್ತಂಭದ ಎದು ರಿಗೆ ಮೊದಲನೆಯ ವರ್ತುಳದ ಒಳಭಾಗದಲ್ಲಿ ೪ ಫೂಟಿನ ಅಂತರದ ಮೇಲೆ ಗಾಯನ ಮೇಳಿಗಳು ಸ್ತಂಭದ ಕಡೆಗೆ ಮುಖಮಾಡಿ ನಿಂತಿರುತ್ತವೆ. ಅಧ್ಯಕ್ಷರ ಬದಿಯಲ್ಲಿ ಇಕ್ಕೆಲ ಗಳಲ್ಲಿಯೂ ದಲದ ವಿವಿಧ ಸರ್ವ ಅಧಿಕಾರಿಗಳು ನಿಲ್ಲುವರು. ಅವರ ಹಿಂದೆ ನಿಮಂತ್ರಿತ ಜನರಾಗಲಿ, ಕಾಂಗ್ರೆಸ್ಸು ಅಥವಾ ಇತರ ಅಧಿವೇಶನಗಳ ಕಾಲಕ್ಕೆ ಕಾರ್ಯಕಾರೀ ಮಂಡಳದ ಸಭಾಸದರಾಗಲಿ, ಅಖಿಲ ಭಾರತ ಕಾಂಗ್ರೆಸ ಕಮೀಟಿಯ ಸದಸ್ಯರಾಗಲಿ ಅಥವಾ ಪ್ರಾಂತಿಕ ಕಾಂಗ್ರೆಸ ಕಮೀಟಿಗಳ ಸಭಾಸದರಾಗಲಿ ನಿಲ್ಲುವರು. ಮುಂದಿನ ವರ್ತುಳದಲ್ಲಿ ಸ್ತಂಭ

ಡೆಡೆಗೆ ಮೋರೆ ಮಾಡಿ ಧ್ವಜವಂದನೆಯನ್ನು ಮಾಡುವ ಸೈನಿಕರು ನಿಲ್ಲುತ್ತಾರೆ. ಮೊದಲನೆಯ ಸಾಲಿನಲ್ಲಿ ಬಾಲಿಕೆಯರೂ ಸ್ತ್ರೀಯರೂ ನಿಲ್ಲುವರು. ಅವರ ಹಿಂದೆ ಸಣ್ಣ ಹುಡುಗರ ಸಾಲು ಇದ್ದು ಅವರ ಹಿಂದೆ ಸೈನಿಕರ ಸಾಲುಗಳನ್ನು ನಿಲ್ಲಿಸಬೇಕು.

ಸ್ತಂಭದ ಸುತ್ತಲು ಮೊದಲು ಮೇಲ್ಕಾಣಿಸಿದಂತೆ ವರ್ತುಳಗಳನ್ನು ತೆಗೆಯಬೇಕು. ಬಳಿಕ ಇವೆಲ್ಲವುಗಳ ಸುತ್ತಲೂ ಎಲ್ಲ ದಿಕ್ಕುಗಳಿಂದಲೂ ಸುಮಾರು ೧೦ ಫೂಟು ಸ್ಥಳವನ್ನು ಬಿಟ್ಟು ಒಂದು ದೊಡ್ಡ ಸೀಮಾರೇಷೆಯನ್ನು ಕೊರೆಯಬೇಕು. ರೇಷೆಯ ಹೊರಗೆ ಪ್ರೇಕ್ಷಕರು ನಿಲ್ಲತಕ್ಕದ್ದಿರುತ್ತದೆ. ಅದರೊಳಗೆ ಪ್ರೇಕ್ಷಕರನ್ನು ಎಂದಿಗೂ ಬರಗೊಡಬಾರದು. (ಧ್ವಜಸ್ತಂಭದ ಬಿಂದುವನ್ನು ಸುತ್ತಲಿನ ಗೆರೆಗಳನ್ನು ತೋರಿಸುವ ಆಕೃತಿಯನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.)

ಧ್ವಜವನ್ನು ನಿಲ್ಲಿಸುವ ಕಾಲಕ್ಕೆ ಮೊದಲು ಮುಂದೆ ಹೇಳುವಂತೆ ಅದರ ಮಡಿಕೆಯನ್ನು ಮಾಡಿ, ಕಟ್ಟಿ ಅದನ್ನು ಸ್ತಂಭದ ಮೇಲೆ ಏರಿಸತಕ್ಕದ್ದು. ಮೊದಲು ಧ್ವಜದ ನಾಲ್ಕು ಮೂಲೆಗಳನ್ನು ಜಗ್ಗಿ ಹಿಡಿದು ಕೆಂಪು ಬಣ್ಣದ ಪಟ್ಟೆಯು ಎಲ್ಲಕ್ಕೂ ಕೆಳಗೆ, ಹಸರು ಪಟ್ಟೆಯು ನಡುವೆ, ಮತ್ತು ಬಿಳೀ ಪಟ್ಟೆಯು ಪೂರ್ಣವಾಗಿ ಮೇಲೆ ಬರುವ ಪ್ರಕಾರ ಮಡಿಚಬೇಕು. (ಈ ಕಾಲಕ್ಕೆ ಉದ್ದ ಮೈಯ್ಯನ್ನು ಹಾಗೇ ಇಟ್ಟು ಅಡ್ಡಮುಗ್ಗಲಿಗೆ ಒಂದರ ಮೇಲೊಂದು ಬರುವಂತೆ ಮೂರು ಮಡಿಕೆಗಳನ್ನು ಮಾಡಬೇಕು. ಅಂದರೆ ಮುಮ್ಮಡಿಯ ಒಂದು ಉದ್ದ ಪಟ್ಟೆಯು ಸಿದ್ಧವಾಗುವದು.) ಅವಶ್ಯವೆನಿಸಿದರೆ ಆ ಪಟ್ಟೆಗಾದರೂ ಹೆಚ್ಚಿಗೆ ಮಡಿಕೆಯನ್ನು ಹಾಕಬಹುದು. ಬಳಿಕ

ಈ ಉದ್ದ ಪಟ್ಟಿಗೆ ಹಾರಾಡುವ ಮಗ್ಗಲಿನಿಂದ ಪಾಗೋಟೆಯ ನಿರಿಗೆಗಳಂತೆ ನಿರಿಗೆಗಳನ್ನು ಹಾಕಬೇಕು. ಗಾಲಿಯ ಮೇಲಿನಿಂದ ಬರುವ ನುಲಿಯ ಹೊರದುದಿಯನ್ನು ಧ್ವಜದ ಮೇಲಿನ ಎಡಮಗ್ಗಲಿಗಿರುವ ತುದಿಯ ಸಣ್ಣ ಚುಂಗಿಗೆ ಕಟ್ಟಬೇಕು. ಮತ್ತು ಧ್ವಜದ ಕೆಳಗೆ ಎಡದುದಿಗೆ ಗಾಲಿಯ ಮೇಲಿಂದ ಬರುವ ನುಲಿಯ ಒಳತುದಿಯನ್ನು ಕಟ್ಟಬೇಕು. ಸ್ತಂಭ ಮತ್ತು ಧ್ವಜ ಇವುಗಳ ನಡುವಿನ ನುಲಿಯ ಕೆಳದುದಿಯಿಂದ ನಿರಿಗೆ ಹಾಕಿದ ಧ್ವಜದ ಗಂಟಿಗೆ ಸುತ್ತಿ ಅದಕ್ಕೊಂದು (ಜಗ್ಗಿದ ಕೂಡಲೆ ಸಹಜವಾಗಿ ಬಿಚ್ಚುವಂತೆ) ಸರಿಗಂಟನ್ನು ಹಾಕಬೇಕು. ಅಂದರೆ ಧ್ವಜದ ಒಂದು ಸಣ್ಣಗಂಟು ಸಿದ್ಧವಾಗುವದು. ಈ ಗಂಟನ್ನು ಧ್ವಜವಂದನ ವಿಧಿಯ ಮೊದಲು ಸ್ತಂಭದ ಮೇಲೆ ಪೂರ್ಣವಾಗಿ ಏರಿಸಿಡಬೇಕು. ಗಂಟಿನ ಕೆಳಗೆ ಜೋತಾಡುವ ನುಲಿಯನ್ನು ಸ್ತಂಭದ ಸುತ್ತಲು ಸಹಜವಾಗಿ ಕೈಗೆ ನಿಲುಕುವಂತೆ ಕೆಲವೊಂದು ಮಾಡರಿಯ ಸರಿಗಂಟನ್ನು ಹಾಕಿ ಕೆಳಭಾಗದಲ್ಲಿ ಕಟ್ಟಬೇಕು. ಈ ರೀತಿಯಾಗಿ ಧ್ವಜವೇರಿಸುವ ವ್ಯವಸ್ಥೆಯನ್ನು ಸಿದ್ಧಗೊಳಿಸಿಡಬೇಕು.

ದಲದ ಅಧಿಕಾರಿಗಳು ತಮ್ಮ ತಮ್ಮ ಪಥಕಗಳನ್ನು ಸಿದ್ಧಗೊಳಿಸಿ ಧ್ವಜವಂದನ ಕ್ಷೇತ್ರದ ಎಡಪಕ್ಕದಿಂದ ಒಂದರ ಹಿಂದೊಂದು ತೆಗೆದುಕೊಂಡು ಶಿಸ್ತಿನಿಂದ ಹೋಗತಕ್ಕದ್ದು ಮತ್ತು ನೇಮಿಸಿ ಕೊಟ್ಟ ಸ್ಥಳಗಳಲ್ಲಿ ಅವರನ್ನು ನಿಲ್ಲಿಸಬೇಕು. ಹೀಗೆ ಮಾಡುವ ಕಾಲಕ್ಕೆ ಸಣ್ಣ ಹುಡುಗ ಹುಡಿಗೆಯರ, ಮತ್ತು ಸ್ತ್ರೀಯರ ಸ್ಥಳಗಳನ್ನು ಲಕ್ಷದಲ್ಲಿಡಬೇಕು. ಮತ್ತು

ಮೊದಲು ಅವರನ್ನೇ (ಸ್ತ್ರೀಯರನ್ನು ಬಾಲಬಾಲಿಕೆಯರನ್ನು) ಒಳಗೆ ಹೋಗಗೊಡಬೇಕು. ಗಾಯನ ಹೇಳುವವರು, ವಾದ್ಯ ಬಾರಿಸುವವರು, ಬ್ಯಾಗಲು ಊದುವವರು, ಮತ್ತು ಬೇರೆ ಬೇರೆ ಅಧಿಕಾರಿಗಳು ನಿಯಮಿಸಿಕೊಟ್ಟ ತಮ್ಮ ತಮ್ಮ ಸ್ಥಳ ಗಳಲ್ಲಿಯೇ ಹೋಗಿ ನಿಂತುಕೊಳ್ಳಬೇಕು. ಮತ್ತು ನಿಮಂ ತ್ರಿತ ಅಥಿತಿಗಳನ್ನೂ ಕಾಂಗ್ರೆಸ್ಸಿನ ಪ್ರಮುಖ ಮುಂದಾಳು ಗಳನ್ನೂ ಅವರಿಗೆಂದು ಗೊತ್ತು ಮಾಡಿದ ಸ್ಥಳಗಳಲ್ಲಿ ನಿಲ್ಲಿಸಬೇಕು.

## ಎಂಟನೆಯ ಪಾಠ

## ಧ್ವಜಾರೋಹಣ ವಿಧಿಯು

ಎಲ್ಲ ಸೈನಿಕರೂ ಪ್ರೇಕ್ಷಕರೂ ತಮ್ಮ ತಮ್ಮ ಸ್ಥಳಗಳಲ್ಲಿ " ಹುಶ್ಯಾರ್ „ ಈ ಸ್ಥಿತಿಯಲ್ಲಿ ಸಿಸ್ತಿನಿಂದ ನಿಂತ ಮೇಲೆ ಮೊದಲು " ವಂದೇ ಮಾತರಂ „ ರಾಷ್ಟ್ರಗೀತವನ್ನು ಅನ್ನಬೇಕು ಈ ಕಾಲಕ್ಕೆ ಎರಡೂ ಕೈಗಳನ್ನು ಜೋಡಿಸಿ ನಿಲ್ಲುವ ಪದ್ಧತಿಯು ಬಹಳ ಕಡೆಗಳಲ್ಲಿದೆ. ಈ ಪದ್ಧತಿಯನ್ನು ತೆಗೆದುಹಾಕಬೇಕು. ಕವಾಯತಿನ ಕಾಲಕ್ಕೆ ಎರಡೂ ಕೈಗಳನ್ನು ಇಳಿಬಿಟ್ಟು ದಂಡಾಳುಗಳು ಸೆಟೆದು ನಿಲ್ಲುವಂತೆ ಧ್ವಜವಂದನ ಪ್ರಸಂಗದಲ್ಲಿಯೂ ನಾವೆಲ್ಲರೂ ನಿಲ್ಲತಕ್ಕದ್ದು.

ಧ್ವಜವು ಮಡಿಚಿದ ಸ್ಥಿತಿಯಲ್ಲಿದ್ದು ಧ್ವಜಸ್ತಂಭದ ಮೇಲ್ತುದಿಗೆ ತೊಡಕಿಸಲ್ಪಟ್ಟಿರುತ್ತದೆ. ಧ್ವಜ ರಕ್ಷಕನು ಅಧ್ಯಕ್ಷರಿಗೆ ವಾಡಿಕೆಯಂತೆ " ನಮಸ್ತೆ „ ಎಂದು ಹೇಳಿ ಅವರಿಗೆ ಧ್ವಜವನ್ನು ಹಾರಿಸಲು ವಿನಂತಿಯನ್ನು ಮಾಡಿಕೊಳ್ಳಬೇಕು. ಮತ್ತು ತಾನು ಸ್ವತಃ ಸ್ತಂಭದ ಹತ್ತರ ಹೋಗಿ ಧ್ವಜ ಸ್ತಂಭಕ್ಕೆ ಕೆಳಗೆ ಕಟ್ಟಿದ ನುಲಿಯನ್ನು ಬಿಚ್ಚಬೇಕು. ಮತ್ತು ನುಲಿಯ ಒಳಭಾಗವನ್ನು ( ಸ್ತಂಭ ಮತ್ತು ಧ್ವಜಗಳಲ್ಲಿಯ ನುಲಿಯನ್ನು ) ಸ್ತಂಭದ ಹತ್ತರ ನಿಂತಿರುವ ಅಧ್ಯಕ್ಷರ ಎಡಗೈಯಲ್ಲಿ ಕೊಡಬೇಕು ಮತ್ತು ತಾನು ಸ್ವತಃ ಎಲ್ಲರಿಗೆ "ನಮಸ್ತೆ„ ಎಂಬ ಕಟ್ಟಾಜ್ಞೆಯನ್ನು ಕೊಡಬೇಕು. ಅದೇ ಸಮಯಕ್ಕೆ ಅಧ್ಯಕ್ಷರು ಎಡಗೈಯಿಂದ ಒಳನುಲಿಯನ್ನು ಜಗ್ಗಿ ಗಟ್ಟಿಯಾಗಿ ಹಿಡಿದು ಬಲಗೈಯಿಂದ ಧ್ವಜದ ಸುತ್ತಲು

ಕಟ್ಟಿದ ಸರಿಗಂಟಿನ ಹಗ್ಗವನ್ನು ಎಳೆಯಬೇಕು. ಗಂಟು ಬಿಚ್ಚಿದ ಕೂಡಲೆ ಧ್ವಜವು ಹವೆಯಲ್ಲಿ ಹಾರಾಡಹತ್ತುತ್ತದೆ. ಅದೇ ಕಾಲಕ್ಕೆ ಎಲ್ಲ ಜನರು ಧ್ವಜಕ್ಕೆ "ನಮಸ್ತೆ"ಯ ವಂದನೆ ಯನ್ನರ್ಪಿಸುವರು ; ಹಾಗೂ ಆಗ್ಗೆ ವಾದ್ಯಗಳು ಬಾರಿಸ ಲ್ಪಡುವವು. ಧ್ವಜವು ಹಾರಾಡುವದು, "ನಮಸ್ತೆ"ಯನ್ನು ಮಾಡುವದು ಬಿಗುಲ ಮತ್ತು ಇತರ ವಾದ್ಯಗಳನ್ನು ಬಾರಿಸು ವದು ಇವೆಲ್ಲ ಕ್ರಿಯೆಗಳು ಒಂದೇ ಕಾಲಕ್ಕೆ ಸರಿಯಾಗಿ ಆಗಬೇಕು.

ಬಳಿಕ ಧ್ವಜದ ಸುಲಿಯನ್ನು ಮೊದಲಿನಂತೆ ಸ್ತಂಭಕ್ಕೆ ಬಿಗಿದು ಧ್ವಜ ರಕ್ಷಕನು ಮತ್ತೊಮ್ಮೆ ಅಧ್ಯಕ್ಷರಿಗೆ "ನಮಸ್ತೆ" ಮಾಡುವನು. ಮತ್ತು ತನ್ನ ಮೊದಲಿನ ಸ್ಥಳಕ್ಕೆ ಹೋಗು ವನು. ಅದೇ ಪ್ರಕಾರ ಅಧ್ಯಕ್ಷರೂ ತಮ್ಮ ಸ್ಥಳಕ್ಕೆ ಹೋಗ ಬೇಕು. ಆ ಮೇಲೆ ಎಲ್ಲ ಜನರು ಓರಣದಿಂದ ನಿಂತು ಧ್ವಜ ರಕ್ಷಕನ ಆಜ್ಞೆಯಂತೆ ಮೊದಲು "ಧ್ವಜಾಭಿವಂದನ"ವನ್ನು ಪದ್ಧತಿಗನುಸರಿಸಿ ಮಾಡಬೇಕು. ಮತ್ತು "ವಿಜಯೀ ವಿಶ್ವತಿ ರಂಗಾ ಪ್ಯಾರಾ" ಈ ಹಾಡನ್ನು ಹಾಡಬೇಕು. (ಈ ಅಭಿ ವಾದನ ವಿಷಯಕ ಮಾಹಿತಿಯನ್ನೂ, ಕವಾಯತಿನ ಚಿತ್ರ ವನ್ನೂ, ಮೇಲಿನ ಎರಡೂ ಹಾಡುಗಳನ್ನೂ ಪರಿಶಿಷ್ಟದಲ್ಲಿ ಕೊಟ್ಟಿದೆ.) ಬಳಿಕ ಅಧ್ಯಕ್ಷರ ಮತ್ತು ಇತರರ ಕೆಲವು ಭಾಷಣಗಳು ಆಗುತ್ತವೆ. ಇದೇ ಕಾಲಕ್ಕೆ ಮುಂದಿನ ಕಾರ್ಯಕ್ರಮವೇನಾದರೂ ಇದ್ದರೆ ಅದನ್ನು ಪ್ರಸಿದ್ಧಪಡಿ ಸುವರು. ಮತ್ತು ಕೊನೆಗೆ "ವಂದೇಮಾತರಂ" ಮತ್ತು "ಭಾರತ ಮಾತಾಕೀ ಜಯ" ಮತ್ತು "ಕರ್ನಾಟಕ

ಮಾತಾಕೀ ಜಯ „ ಈ ಜಯಜಯಕಾರಗಳನ್ನು ಮಾಡ ಬೇಕು. ಇಷ್ಟಾದ ಮೇಲೆ ಆರೋಹಣ ವಿಧಿಯು ಸಮಾಪ್ತ ವಾಗುತ್ತದೆ.

ಸೈನಿಕರು ವರ್ತುಳದಿಂದ ಹೊರಬೀಳುವಾಗ ಶಿಸ್ತಿನಿಂದ ನಡೆಯಬೇಕು. ಮೊದಲು ಮೊದಲಿನ ಸಾಲಿನವರೂ ನಂತರ ಎರಡನೆಯ ಸಾಲಿನವರೂ ಕ್ರಮ ಕ್ರಮವಾಗಿ ಒಬ್ಬರ ಹಿಂದೊಬ್ಬರು ಸಾಲಾಗಿ ತಮ್ಮ ಬಲಪಕ್ಕದಿಂದ ಹೊರಬೀಳ ಬೇಕು. ಮತ್ತು ಯಾವುದೇ ಬಗೆಯ ಒದರಾಟ ಚೀರಾಟ ಗಳನ್ನು ಮಾಡದೆ ತಮ್ಮ ತಮ್ಮ ಪಥಕಾಧಿಕಾರಿಗಳ ಅಪ್ಪಣೆ ಯಂತೆ ಕಾರ್ಯಕ್ಕೆ ತೊಡಗಬೇಕು.

ಎರಡನೆಯ ಪ್ರಸಂಗಗಳಲ್ಲಿ ಸಹ “ವಂದೇಮಾತರಂ „ ಈ ರಾಷ್ಟ್ರಗೀತೆಯನ್ನು ಹಾಡುತ್ತಿರುವಾಗ ಯಾರೂ ಕುಳಿತು ಕೊಳ್ಳಕೂಡದು. ಈ ಕಾಲಕ್ಕೆ ಯಾವನೊಬ್ಬ ಮೂರನೆ ಯವನು ಬಂದಿದ್ದರೂ ಅವನೂ ಎದ್ದು ನಿಲ್ಲಬೇಕು. ರಾಷ್ಟ್ರ ಗೀತದ ಕಾಲಕ್ಕೆ ಕುಳಿತುಕೊಂಡಿರುವದೆಂದರೆ ರಾಷ್ಟ್ರದ ಅಪಮಾನವನ್ನೂ ಅಪರಾಧವನ್ನೂ ಮಾಡಿದಂತೆಯೇ ಸರಿ. ಧ್ವಜಗೀತೆಯನ್ನು ಹೇಳುವಾಗಲೂ ಹೀಗೆಯೇ ಮಾಡುವ ದವಶ್ಯವು.

## ಒಂಬತ್ತನೆಯ ಪಾಠ

## ಧ್ವಜಾವತರಣ ವಿಧಿಯು

ಈ ಕಾಲಕ್ಕಾದರೂ ಧ್ವಜಾರೋಹಣದ ಕಾಲಕ್ಕೆ ಇದ್ದಂತೆ ಎಲ್ಲ ಸೈನಿಕರು ಧ್ವಜದ ಮುಂದೆ ಶಿಸ್ತಿನಿಂದ ನಿಲ್ಲುವರು. ಬಳಿಕ "ರಾಷ್ಟ್ರಗಗನಕೀ ದಿವ್ಯಜ್ಯೋತಿ„ ಈ ಧ್ವಜಗೀತೆಯನ್ನು ಅನ್ನುತ್ತಾರೆ. ( ಪರಿಶಿಷ್ಟವನ್ನು ನೋಡಿರಿ) ನಂತರ ಮೊಳಕಾಲೂರಿ ವಂದನೆಯನ್ನು ಮಾಡಿ ಧ್ವಜವನ್ನು ಕೆಳಗೆ ಇಳಿಸುವರು. ಮತ್ತು ಅದೇ ಕಾಲಕ್ಕೆ ಧ್ವಜಕ್ಕೆ "ನಮಸ್ತೆ„ಯ ವಂದನೆಯನ್ನರ್ಪಿಸಿ ವಾದ್ಯಗಳನ್ನು ಬಾರಿಸುವರು. ಧ್ವಜವನ್ನು ಇಳಿಸಿದ ಬಳಿಕ ಅದನ್ನು ಮೊದಲಿನಂತೆ ಮಡಿಚಿ ಅದನ್ನು ಒಂದು ಚೀಲದಲ್ಲಿ ಹಾಕಬೇಕು. ಮತ್ತು ಆ ಚೀಲವನ್ನು ಕಟ್ಟಿ ಮುದ್ರೆ ಹಾಕಿ ( ಸೀಲ) ಧ್ವಜ ರಕ್ಷಕನು ಯೋಗ್ಯ ಸ್ಥಳದಲ್ಲಿ ಇಡುವದಕ್ಕೋಸ್ಕರ ವರಿಷ್ಠ ಅಧಿಕಾರಿಯ ವಶದಲ್ಲಿ ಕೊಡಬೇಕು. ಧ್ವಜವನ್ನು ಕೊಡುವ ಮೊದಲು ಧ್ವಜರಕ್ಷಕನು ಅಧಿಕಾರಿಗೆ "ನಮಸ್ತೆ„ಯನ್ನು ಮಾಡುತ್ತಾನೆ. ನಂತರ "ವಂದೇಮಾತರಂ„ ಪದವನ್ನು ಹಾಡಿದ ಬಳಿಕ ಗೊತ್ತಾದ ಜಯಘೋಷವನ್ನು ಮಾಡಿದ ಮೇಲೆ ಎಲ್ಲ ಜನರು ಹಿಂದೆ ಹೇಳಿದಂತೆ ತಮ್ಮ ಬಲಪಕ್ಕದಿಂದ ಒಬ್ಬರ ಹಿಂದೊಬ್ಬರು ಧ್ವಜವಂದನೆಯ ಕ್ಷೇತ್ರದ ಹೊರಗೆ ಶಿಸ್ತಿನಿಂದ ಹೋಗುವರು. ಮತ್ತು ತಮ್ಮ ತಮ್ಮ ಪಥಕಾಧಿಕಾರಿಗಳ ಅಪ್ಪಣೆಯ ಮೇರೆಗೆ ಮುಂದಿನ ಕೆಲಸಕ್ಕೆ ಹತ್ತುವರು.

ಧ್ವಜಾರೋಹಣ ವಿಧಿಯನ್ನು ಸೂರ್ಯೋದಯ ಕಾಲಕ್ಕೆ ನೆರವೇರಿಸುವರು. ಮತ್ತು ಧ್ವಜಾವತರಣ ವಿಧಿಯನ್ನು ಸೂರ್ಯಾಸ್ತದ ಸಮಯಕ್ಕೆ ಜರುಗಿಸುವರು. ಧ್ವಜ ಸಂರಕ್ಷಣೆಯ ವ್ಯವಸ್ಥೆಯು ಇಲ್ಲದೆಡೆಗಳಲ್ಲಿ ಧ್ವಜವನ್ನು ಒಂದೇ ತಾಸಿನವರೆಗಿಟ್ಟು ಬಳಿಕ ವಿಧಿಯುಕ್ತವಾಗಿ ಇಳಿಸಬೇಕು.

ಆರೋಹಣ ಮತ್ತು ಅವತರಣ ವಿಧಿಗಳಲ್ಲಿ ಕೊಂಚ ಮಟ್ಟಿಗೆ ಅಂತರವಿದೆಯೆಂಬುದನ್ನು ಮರೆಯಲಾಗದು. ಆರೋಹಣದ ಕಾಲಕ್ಕೆ " ಒಂದೇಮಾತರಂ " ಈ ಗೀತವನ್ನು ಮೊದಲು ಹಾಡುವರು ಮತ್ತು ಅವತರಣ ವಿಧಿಯ ಸಮಯಕ್ಕೆ ಅದನ್ನು ಕೊನೆಗೆ ಹಾಡುವರು. ಅದರಂತೆಯೇ ಆರೋಹಣದ ಕಾಲಕ್ಕೆ ಧ್ವ ಜ ವು ಹಾರಾಡಹತ್ತಿದ ನಂತರ "ಧ್ವಜಾಭಿವಂದನ"ವನ್ನು ಮಾಡುವರು. ಆದರೆ ಅವತರಣ ವಿಧಿಯ ಕಾಲಕ್ಕೆ ಅದನ್ನು ಧ್ವಜವನ್ನಿಳಿಸುವ ಮೊದಲೇ ಮಾಡಬೇಕಾಗುತ್ತದೆ. ಆರೋಹಣದ ಕಾಲಕ್ಕೆ "ವಿಜಯೀ ವಿಶ್ವತಿ ರಂಗಾ ಪ್ಯಾರಾ " ಈ ಹಾಡನ್ನು ಹಾಡತಕ್ಕದ್ದಿರುತ್ತದೆ. ಆದರೆ ಅವತರಣದ ಕಾಲಕ್ಕೆ " ರಾಷ್ಟ್ರಗಗನಕೀ ದಿವ್ಯಜ್ಯೋತಿ " ಎಂಬ ಹಾಡನ್ನು ಹೇಳುತ್ತಾರೆ.

## ಹತ್ತನೆಯ ಪಾಠ

### ಎಲ್ಲಿ ? ಯಾರು ? ಮತ್ತು ಹೇಗೆ ?

ಈ ಧ್ವಜವಂದನ ವಿಧಿಯನ್ನು ಯಾವದೇ ರಾಷ್ಟ್ರೀಯ ಸಂಸ್ಥೆಯಾಗಲಿ ಇಲ್ಲವೆ ಅದರ ಶಾಖೆ—ಉಪಶಾಖೆಗಳಾಗಲಿ ಗೊತ್ತುಪಡಿಸಿದ ದಿನವೇ ಮಾಡಬೇಕು. ಉಳಿದ ಸರ್ವ ಸಾಧಾರಣ ಸಭೆಯ ಕಾಲಕ್ಕೆ ಪೂರ್ಣ ರೀತಿಯಿಂದಾಗುವಂತಿದ್ದರೆ ಮಾತ್ರ ಮಾಡಬೇಕು. ಅದನ್ನು ಅರ್ಧದಲ್ಲಿಯೇ ಬಿಟ್ಟರೆ ವಿಧಿಯ ಮಹತ್ವವನ್ನು ಕಡಿಮೆಮಾಡಿದ ಪಾತಕವು ಬರುವ ಸಂಭವವುಂಟು. ಈ ಮಾತನ್ನು ಲಕ್ಷದಲ್ಲಿಡಬೇಕು.

ಈ ವಿಧಿಯನ್ನೂ ಈ ವಿಧಿಯ ಮಹತ್ವವನ್ನೂ ಸೈನಿಕರಿಗೆ ಶಿಬಿರದಲ್ಲಿಯೇ ಕಲಿಸಬೇಕು. ಮತ್ತು ಪ್ರತಿಯೊಬ್ಬನಿಗೆ ಅದನ್ನು ಎಲ್ಲಿಯಾದರೂ ಯಾವಾಗಲಾದರೂ ಅಪ್ಪಣೆಯಾದ ಕೂಡಲೆ ಮಾಡಲು ಮತ್ತು ಮಾಡಿಸಲು ಬರಬೇಕೆಂದು ತಿಳಿದು ಶಿಬಿರದಲ್ಲಿಯ ಸೈನಿಕರಿಂದಲೂ ವಿದ್ಯಾರ್ಥಿಗಳಿಂದಲೂ ಪೂರ್ಣವಾಗಿ ವ್ಯಕ್ತಿಶಃ ಮಾಡಿಸಿಕೊಳ್ಳಬೇಕು. ಮತ್ತು ಈ ಪೂಜ್ಯ ಧ್ವಜದ ವಿಷಯಕ್ಕೆ ಪ್ರೇಮವೂ ಆದರವೂ ಹುಟ್ಟುವಂತೆ ಮಾಡಬೇಕು.

ಧ್ವಜಾರೋಹಣ ಮತ್ತು ಧ್ವಜಾವತರಣ ಈ ಎರಡೂ ವಿಧಿಗಳು ಅತ್ಯಂತ ಪವಿತ್ರವಾಗಿರುವುದರಿಂದ ಅವುಗಳನ್ನು ಅತ್ಯಂತ ಶಿಸ್ತಿನಿಂದಲೂ ಶಾಂತತೆಯಿಂದಲೂ ಪಾಲಿಸಬೇಕು. ಆ ಕಾಲಕ್ಕೆ ಗೊತ್ತುಪಡಿಸಿದ ಹಾಡುಗಳನ್ನೇ ಹಾಡಬೇಕು. ಮತ್ತು ಗೊತ್ತಾದ ಜಯಜಯಕಾರಗಳನ್ನೇ ಮಾಡಬೇಕು.

ಭಾಷಣಗಳು ಆದಷ್ಟು ಮಟ್ಟಿಗೆ ಸಂಕ್ಷಿಪ್ತವಾಗಿರಬೇಕು. ಈ ವಿಧಿಗೆ ಕೇವಲ ೫ರಿಂದ ೭ ನಿಮಿಷ(ಮಿನಿಟು)ಗಳಿಗಿಂತ ಹೆಚ್ಚಿಗೆ ಬೇಕಾಗುವದಿಲ್ಲ. ಮತ್ತು ಹಾಗೆ ಹೆಚ್ಚಿಗೆ ಬೇಕಾಗಕೂಡದು.

ಧ್ವಜವಂದನೆಗಾಗಿ ವಿಧಿಕ್ಷೇತ್ರದಲ್ಲಿ ಒಟ್ಟುಗೂಡಿದ ಸೈನಿಕರೂ, ವಿದ್ಯಾರ್ಥಿಗಳೂ ಇತರ ಜನರೂ ಒಂದೇ ಕಾಲಕ್ಕೆ ಮತ್ತು ಒಂದೇ ಪದ್ಧತಿಯಿಂದ ಈ ವಿಧಿಯನ್ನು ಪಾರುಗಾಣಿಸಬೇಕು. ಜಾತಿ, ಧರ್ಮ, ಭಾಷೆ, ಪ್ರಾಂತ ಇಲ್ಲವೆ ಪಂಥಗಳ ವಿಷಯವಾಗಿರುವ ಬೇಧಭಾವವನ್ನು ಈ ಕಾಲಕ್ಕೆ ತಿಲಮಾತ್ರವೂ ಮನ್ನಿಸಕೂಡದು.

ಈ ವಿಧಿಯೂ ಧ್ವಜಾಭಿವಂದನದಂತಹ ವಂದನ ಪ್ರಕಾರವೂ ಜಗತ್ತಿನ ಬೇರಾವ ದೇಶದಲ್ಲಿಯೂ ದೃಷ್ಟಿಗೆ ಬೀಳುವದಿಲ್ಲ.ಅದು ಕೇವಲ ಆರ್ಯಸಂಸ್ಕೃತಿಯದಿದ್ದು ನಮ್ಮ ಉಚ್ಚ ಸಂಸ್ಕೃತಿಯ ದ್ಯೋತಕವಾಗಿರುವದು. ಅದರಲ್ಲಿರುವ ಶಿಸ್ತು ಮಾತ್ರ ಪಾಶ್ಚಾತ್ಯ ಸ್ವರೂಪದ್ದಿದೆ. ಸ್ವತಃದ ಸ್ಥಳದಲ್ಲಿ ಬೇಕಾದ ಮನುಷ್ಯನಿಗಾಗಲಿ ಸಂಸ್ಥೆಗಾಗಲಿ ತನ್ನ ಇಲ್ಲವೆ ಮನೆಯ ಮೇಲೆ ಧ್ವಜವನ್ನೇರಿಸಲು ಅವನಿಗೆ ಅಥವಾ ಅದಕ್ಕೆ ಪೂರ್ಣ ಅಧಿಕಾರವಿದೆ. ಇದಕ್ಕಾಗಿ ದಿನ ಅಥವಾ ಕಾಲದ ನಿರ್ಬಂಧವಿಲ್ಲ. ಧ್ವಜವನ್ನು ವಿಧಿಪೂರ್ವಕವಾಗಿಯೇ ಏರಿಸಬೇಕೆಂಬ ನಿಯಮವಿಲ್ಲ. ಪ್ರೇಮ ಹಾಗೂ ಆದರವಿದ್ದರೆ ತೀರಿತು.

ಸ್ವತಂತ್ರ ರಾಷ್ಟ್ರದ ಪ್ರತಿಯೊಂದು ನಗರದಲ್ಲಿ ಅಥವಾ ಪಟ್ಟಣದಲ್ಲಿ ಅಲ್ಲಿಯ ಮ್ಯುನಸಿಪಾಲಿಟಿಯ ಮೇಲಾಗಲೀ ಸರಕಾರೀ ಕಟ್ಟಡದ ಮೇಲಾಗಲಿ ಇಲ್ಲವೆ ತೋಟದಲ್ಲಾಗಲಿ

ಧ್ವಜಸ್ತಂಭಕ್ಕಾಗಿ ಒಂದು ಗೊತ್ತಾದ ಸ್ಥಳವಿರುತ್ತದೆ. ಎಲ್ಲ ಸೈನಿಕರು ಅಲ್ಲಿ ಗೊತ್ತುಮಾಡಿದ ದಿನ ಗೊತ್ತಾದ ಕಾಲಕ್ಕೆ ಕೂಡಿ ಶಿಸ್ತಿನಿಂದಲೂ ಗೊತ್ತಾದ ಪದ್ಧತಿಯಿಂದಲೂ ಧ್ವಜವಂದನೆಯನ್ನು ಮಾಡುವರು. ಇದೇ ಪದ್ಧತಿಯು, ತಾನ ಒಂದು ರಾಷ್ಟ್ರವೆಂದೆನ್ನಿಸಿಕೊಳ್ಳುವ ಹಿಂದುಸ್ಥಾನದಲ್ಲಿಯೂ ಆಚರಣೆಯಲ್ಲಿ ಬರಬೇಕಾಗಿದೆ. ಮತ್ತು ರಾಷ್ಟ್ರದ ಆಧಾರ ಸ್ತಂಭರಾದ ಸಕಲ ಸೈನಿಕರು ತಮ್ಮ ದುರಭಿಮಾನವನ್ನೆಲ್ಲ ಬದಿಗಿರಿಸಿ ಧ್ವಜವಂದನ ವಿಧಿಕ್ಷೇತ್ರದ ಮೇಲೆ ಕಲೆತು ಗೊತ್ತಾದ ಪದ್ಧತಿಯಂತೆ ವಂದನೆಯನ್ನಿರ್ಪಿಸಬೇಕು.

ಧ್ವಜವಂದನೆಯ ಕಾಲಕ್ಕೆ ಧ್ವಜದ ಪೂಜೆಯನ್ನು ಮಾಡುವ ಪ್ರಘಾತವು ಕೆಲವೆಡೆಗಳಲ್ಲಿ ಬೀಳಹತ್ತಿದೆ. ಈ ಪದ್ಧತಿಯು ಎಷ್ಟೇ ಭಾವಭಕ್ತಿಗಳಿಂದ ಆಚರಿಸಲ್ಪಡುತ್ತಿದ್ದರೂ ಅದು ಅಯೋಗ್ಯವೇ ಸರಿ. ಧ್ವಜದ ಅರ್ಥಾತ್ ರಾಷ್ಟ್ರದ ಮಾನರಕ್ಷಣೆಗಾಗಿ ಹಗಲಿರುಳು ಹೋರಾಡುವದು ಧ್ವಜದ ನಿಜವಾದ ಪೂಜೆಯು. ಮತ್ತು ಅದಕ್ಕೋಸುಗ ಸರ್ವಸ್ವದ ಆಹುತಿಯನ್ನೀಯುವದೇ ನಿಜವಾದ ನೈವೇದ್ಯೆಯು.

## ಹನ್ನೊಂದನೆಯ ಪಾಠ

## ಧ್ವಜವಂದನೆಯ ಕವಾಯಿತು

ಧ್ವಜಾಭಿವಾದನದ ಈ ಪದ್ಧತಿಯು ಮಹಾಭಾರತದಲ್ಲಿದೆ. ಹಿಂದುಸ್ತಾನದ ಸಂದಿಗೊಂದಿಗಳಲ್ಲಿಯೂ ಇದರ ಪ್ರಚಾರವಾಗಬೇಕು. ಜಗತ್ತಿನಲ್ಲಿಯ ಭಿನ್ನ ಭಿನ್ನ ವಂದನ ಪದ್ಧತಿಗಳ ಕಡೆಗೆ ನಮ್ಮ ದೃಷ್ಟಿಯನ್ನು ತಿರುಗಿಸಿದರೆ ಈ ಪ್ರಕಾರದ ಪದ್ಧತಿಯು ನಮ್ಮಲ್ಲಿ ಮಾತ ಇದೆಯೆಂದೂ ಬೇರೆ ಎಲ್ಲಿಯೂ ಇಲ್ಲವೆಂದೂ ಕಂಡುಬರುತ್ತದೆ ಮತ್ತು ಅದು ಸರ್ವೋತ್ಕೃಷ್ಟವಾಗಿದೆಯೆಂದು ಯಾರಿಗೂ ಹೊಳೆಯದೆ ಇರದು.

ಪ್ರತಿಯೊಂದು ರಾಷ್ಟ್ರಕ್ಕೆ ತನ್ಮದೊಂದು ವೈಶಿಷ್ಟ್ಯವಿದ್ದೇ ಇರುತ್ತದೆ. ನಮ್ಮಾ ಭ ರ ತ ಭೂಮಿಯದಾದರೂ ಒಂದು ವೈಶಿಷ್ಟ್ಯವಿರಬೇಕೆಂದೆನಿಸುವದು ಸಹಜವಾಗಿದೆ. ಅರ್ಥಾತ್ ಈ ಧ್ವಜವಂದನೆಯ ಪದ್ಧತಿಯೇ ನಮ್ಮ ನಾಡಿನ ವೈ ಷ್ಟ್ಯವೆಂದು ಭಾವಿಸಿ ಸ್ವಲ್ಪ ಕಷ್ಟವನ್ನು ಸಹಿಸಿಯೂ ಕೂಡ ಅದನ್ನು ಅಂಗೀಕರಿಸತಕ್ಕದ್ದು. ಧ್ವಜವಂದನೆಯ ಮತ್ತು ನಮಸ್ತೆಯ ಪದ್ಧತಿಯು ಆತ್ಮಗತವಾಗಬೇಕಾದರೆ ಪ್ರತಿಯೊಬ್ಬನೂ ಕವಾಯಿತು ಕಲಿಯುವದವಶ್ಯವು. ಆದ್ದರಿಂದಲೇ ಶಿಬಿರಾಧಿಪತಿಗಳಿಗಾಗಲಿ ಇಲ್ಲವೆ ಶಿಕ್ಷಕರಿಗಾಗಲಿ ಕಲಿಸಲನುಕೂಲನಾಗಬೇಕೆಂದು ಕೊನೆಗೆ ಚಿತ್ರರೂಪದಿಂದ ಅದನ್ನು ಸ್ಪಷ್ಟೀಕರಿಸಿದ್ದೇವೆ. (ಪರಿಶಿಷ್ಟ ೨. ೩. ನೋಡಿರಿ)

ಧ್ವಜಾಭಿವಾದನವಿಷಯದಲ್ಲಿ ಕಲಿಸುವಾಗ ಸಂಖ್ಯಾಕ್ರಮವನ್ನನುಸರಿಸತಕ್ಕದ್ದು. ಮೊದಲು ೬ ನಂಬರುಗಳನ್ನು

ತೆಗೆದುಕೊಳ್ಳಬೇಕು. ಬಳಿಕ ಅದರಿಂದ ಮೂರು ಮಾಡ
ಬೇಕು. ಮತ್ತು ಕೊನೆಗೆ ಒಮ್ಮೆಲೇ ಅಪ್ಪಣೆಯನ್ನು ಕೊಡ
ಬೇಕು ಹೀಗಾಯಿತೆಂದರೆ ಪ್ರತಿಯೊಬ್ಬನಿಗೂ ಶಿಸ್ತಿನಿಂದ
ಒಂದೇ ಕಾಲಕ್ಕೆ ಅಭಿವಾದನಮಾಡಲು ಬರುವದು. ಅದ
ರಂತೆಯೇ "ನಮಸ್ತೆ"ಯ ವಿಷಯದಲ್ಲಿ ಮೊದಲು ಎರಡು
ನಂಬರುಗಳನ್ನು ತೆಗೆದುಕೊಳ್ಳಬೇಕು ಬಳಿಕ ಒಮ್ಮೆಲೇ
ಅಪ್ಪಣೆಯನ್ನು ಕೊಡಬೇಕು.

ಎಲ್ಲ ಸೈನಿಕರೂ ವಿದ್ಯಾರ್ಥಿಗಳೂ ಒಂದೇ ಸಾಲಿನಲ್ಲಿ
ಶಿಸ್ತಿನಿಂದ ನಿಂತ ಬಳಿಕ ಕಲಿಸುವವರು ಮುಂದಿನಂತೆ ಅಪ್ಪಣೆ
ಗಳನ್ನು ಕೊಡಬೇಕು. ಮತ್ತು ಕಲಿಯುವವರು ಅವುಗ
ಳನ್ನು ಅಕ್ಷರಶಃ ಪಾಲಿಸಬೇಕು.

## ಆದೇಶವು

**"ಹುಃಶ್ಯಾರ"**:— ನಿಡಿದಾಗಿ ನಿಲ್ಲಬೇಕು. ಹಿಂಬಡಗಳು ಹೊಂದಿರಬೇಕು ಪಾದಗಳ ನಡುವೆ ೪೫° ಕೋನವಿರಬೇಕು. ಕೈಗಳು ತೊಡೆಯ ಗುಂಟ ನಿಡಿದಾಗಿಯೂ ಮುಷ್ಟಿಗಳು ಅರ್ಧ ಮುಚ್ಚಿದವೂ ಇರಬೇಕು.

**"ಧ್ವಜವಂದನ"**:—**"ಏಕ"**:—ಬಲ ಪಾದವನ್ನು ಸುಮಾರು ೪೦ ಇಂಚುಗಳಾಗಲಿ (ಇಲ್ಲವೆ ಅನುಕೂಲವಾಗುವಂತೆ) ಹಿಂದೆ ಒಯ್ಯಬೇಕು. ಉಳಿದ ಸ್ಥಿತಿಯು ಮೇಲಿನಂತೆಯೇ ಇರತಕ್ಕದ್ದು.

“**ದೋ**”:—ಬಲಗಡೆಯ ಮೊಳಕಾಲನ್ನು ನೆಲದ ಮೇಲೆ ಊರಬೇಕು. ಎರಡೂ ಕೈಗಳನ್ನು ನಿಡಿದಾಗಿ ಇಳಿಬಿಡಬೇಕು. ಆದರೆ ಮುಷ್ಟಿ ಗಳು ವಕ್ರವಾಗಿ ಅರ್ಧ ಮುಚ್ಚಿ ದವಿರಬೇಕು. ಬಲಗಾಲಿನ ಬೆರಳುಗಳನ್ನು ನೆಲದ ಮೇಲೆ ಊರಿ ಹಿಂಬಡವನ್ನು ಎತ್ತತ ಕ್ಕದ್ದು ಈಹಿಂಬಡವನ್ನುತೊಡೆಗೆ ಹಚ್ಚ ಕೂಡದು. ಬಲದೊಡೆ ಯನ್ನು ಸರಳವಾಗಿ ನಿಲ್ಲಿಸಬೇಕು.

“**ತೀನ**”:—ಬಲಗೈ ಬೆರಳುಗಳನ್ನು ಸರಳ ವಾಗಿಯೂ ವ್ಯವಸ್ಥಿತವಾಗಿಯೂ ಜೋಡಿಸಿ ಎದೆಯ ಮೇಲೆ ಗಟ್ಟಿಯಾಗಿ ಇಡಬೇಕು. ಅಂಗೈಯು ನೆಲಕ್ಕೆ ಸಮಾಂತರ ವಾಗಿಯೂ ಹೆಬ್ಬೆರಳಿನ ತುದಿಯು ಎದೆಗೆ (Sternum ಹೆಸರಿನ ಅಸ್ಥಿಯ ಹತ್ತರ) ಹತ್ತಿಯೂ ಮತ್ತು ಉಳಿದ ನಾಲ್ಕು ಬೆರಳು ಗಳ ತುದಿಗಳು ಹೃದಯದ ಮೇಲೆಯೂ ಇರತಕ್ಕದ್ದು. ತಲೆ ಯನ್ನು ಸೆಟೆಯಿಸಿ ತುಸು ಬಗ್ಗಿ

ಸಿರಬೇಕು. ಮತ್ತು ಗದ್ದವು
ಹೃದಯಕ್ಕೆ ಹತ್ತಿದಂತೆ ಇರ
ಬೇಕು. ಎಡಗೈಯನ್ನು
ಮೊಳಕೈ ಹತ್ತರ ಕೊಂಚ ಮಣಿಸಿ
ಎಡತೊಡೆಯ ಮಧ್ಯಭಾಗದ
ಪಕ್ಕಕ್ಕೆ ಹಚ್ಚಬೇಕು. ಈ
ಕಾಲಕ್ಕೆ ಎಡಗೈಯಲ್ಲಿ ಒಂದು
ಕತ್ತಿಯಾಗಲಿ ಅಥವಾ ಒಂದು
ಬಡಿಗೆಯಾಗಲಿ ಇರುವುದೆಂದು
ಕಲ್ಪನೆಯನ್ನು ಮಾಡಬೇಕು.
ಶರೀರವನ್ನು ಬಹಳ ನಿಡಿದಾ
ಗಿಯೂ ಸರಳವಾಗಿಯೂ ಇಡ
ಬೇಕು. ಸ್ವಲ್ಪು ಕೂಡ ಬಗ್ಗಿಸ
ಕೂಡದು.

"ಚಾರ":—ತಲೆಯನ್ನು ಮತ್ತೆ ಸೆಟಸಿ ಮೇಲ
ಕ್ಕೊಯ್ಯಬೇಕು. ಎರಡೂ ಕೈಗ
ಳನ್ನು ಪಕ್ಕಕ್ಕೆ ಸರಿಸಿ "ದೋ„ದ
ಸ್ಥಿತಿಯಲ್ಲಿದ್ದಂತೆ ಇರಬೇಕು.

"ಪಾಚ":—ಒಮ್ಮೆಲೇ ಎದ್ದು ನಿಂತು "ಏಕ„
ದ ಸ್ಥಿತಿಯಲ್ಲಿ ನಿಲ್ಲಬೇಕು.

"ಛೇ":—ಬಲಗಾಲನ್ನು ಮುಂದೆ ತಂದು
"ಹುಃಶ್ಯಾರ„ ಸ್ಥಿತಿಯಲ್ಲಿ
ನಿಲಬೇಕು.

ಈ ಅಭಿವಾದನವನ್ನು ಕೇವಲ ಭಾರತೀಯ ರಾಷ್ಟ್ರ ಧ್ವಜಕ್ಕೆ ಮಾತ್ರ ಮಾಡಬೇಕು. ಬೇರೆ ಯಾವದೇ ಧ್ವಜಕ್ಕಾಗಲಿ ಇಲ್ಲವೆ ಯಾವದೇ ವ್ಯಕ್ತಿಗಾಗಲಿ ಮಾಡತಕ್ಕದ್ದಲ್ಲವೆಂಬುದನ್ನು ಎಲ್ಲರೂ ನೆನೆಪಿನಲ್ಲಿಡಬೇಕು.

## " ನಮಸ್ತೆಯ ಕವಾಯತ "

**"ನಮಸ್ತೆ" ಮಾಡುವ ರೀತಿಯು:-** " ಹುಃಶ್ಯಾರ " ಸ್ಥಿತಿಯಲ್ಲಿ ನಿಂತ ಬಳಿಕ

**" ನಮಸ್ತೆ ":—" ಏಕ ":—** ಹುಕುಮು ಕೊಡುವ ಕಾಲಕ್ಕೆ ಬಲಗೈ ಬೆರಳುಗಳೆಲ್ಲವನ್ನೂ ಜೋಡಿಸಿ ಎದೆಗೆ ಹಚ್ಚಬೇಕು ಹೆಬ್ಬೆರಳು ಹೃದಯಕ್ಕೆ ಹಚ್ಚಿಯೂ ಅಂಗೈಯು ನೆಲದಿಂದ ಸಮಾಂತರವಾಗಿಯೂ ತಲೆಯು ತುಸು ಬಗ್ಗಿಯೂ ಇರಬೇಕು ( ಧ್ವಜಾಭಿವಾದನದಲ್ಲಿಯ " ತೀನ " ದ ಸ್ಪಷ್ಟೀಕರಣವನ್ನು ನೋಡಿರಿ.)

**" ದೋ ":—** ಕೈಗಳನ್ನು ಪಕ್ಕಕ್ಕೆ ಒಯ್ದು " ಹುಃಶ್ಯಾರ " ಈ ಸ್ಥಿತಿಯಲ್ಲಿ ಮೊದಲಿನಂತೆ ನಿಲ್ಲಬೇಕು.

" ನಮಸ್ತೆ " ಯ ಕಾಲಕ್ಕೆ ಅಂಗೈಯನ್ನು ಭೂಮಿಯ ಕಡೆಗೆ ತೋರಿಸಿದ್ದಿರುತ್ತದೆ. ಅದರ ಬೆರಳುಗಳು ಹೃದಯದ ಮೇಲೆ ಇಡಲ್ಪಟ್ಟಿರುತ್ತದೆ. ಮತ್ತು ತಲೆಯು ಕೆಳಗೆ

ಬಗ್ಗಿರುತ್ತದೆ. ಇದರರ್ಥವೇನೆಂದರೆ, “ನಮಸ್ತೆ” ಮಾಡುವವನು ತನ್ನ ತಾಯ್ನಾಡನ್ನು ಸ್ಮರಿಸಿ ಹೃದಯದಲ್ಲಿಯ ಪ್ರತ್ಯಕ್ಷ ಪರಮೇಶ್ವರನನ್ನು ಸಾಕ್ಷಿಯಾಗಿಟ್ಟು ಧ್ವಜಕ್ಕೆ ಅಂದರೆ ರಾಷ್ಟ್ರಕ್ಕೆ ಜನ್ಮಾಂತರದಲ್ಲಿಯೂ ಮರೆಯಲಾರೆನೆಂದೂ ಅದರ ಪ್ರೀತ್ಯರ್ಥ ತನ್ನ ಜೀವಿತವನ್ನು ಕೂಡ ಈಡಾಡಲು ಹಿಂದೆ ಮುಂದೆ ನೋಡುವುದಿಲ್ಲ.

## ಹನ್ನೆರಡನೆಯ ಪಾಠ

### ಜಯಜಯಕಾರ

ಜಯಜಯಕಾರದ ಪದ್ಧತಿಯು ಹಿಂದುಸ್ಥಾನಕ್ಕೆ ಹೊಸ ದೇನೂ ಇರದೆ ಅದು ಪೂರ್ವಕಾಲದಿಂದಲೂ ನಡೆದು ಬಂದದ್ದದೆ. ಈಗ ಜಾಗ್ರತರಾದ ಹಿಂದೀಯರನ್ನು ಶಿಸ್ತು ಸಂಘಟನೆಗಳ ಮಾರ್ಗಕ್ಕೆ ಹಚ್ಚುವವರಿಗೆ ಜಯಜಯಕಾರದ ವಿಷಯದಲ್ಲಿಯೂ ಕೆಲವು ನಿಯಮಗಳನ್ನು ಮಾಡುವದವಶ್ಯವಿದೆ. ಬೇಕಾದವರು ಬೇಕಾದವರ ಜಯಜಯಕಾರವನ್ನು ಬೇಕಾದಂತೆ ಮಾಡುವದು ಶಿಸ್ತಿನ ಲಕ್ಷಣವಿರದೆ ಕೇವಲ ಹುಂಬತನದ ಲಕ್ಷಣವೆಂದು ತಿಳಿಯಬೇಕು. ರಾಷ್ಟ್ರದ ಜಯಜಯಕಾರವನ್ನೇ ಮಾಡಿದರೆ ರಾಷ್ಟ್ರದ ಸಲುವಾಗಿ ಹಗಲಿರುಳು ಹೋರಾಡುವ ವ್ಯಕ್ತಿಗಳ ಜಯಜಯಕಾರವನ್ನೂ ಮಾಡಿದಂತಾಗುತ್ತದೆ. ಅರ್ಥಾತ್ ರಾಷ್ಟ್ರದ ಮುಂದೆ ವ್ಯಕ್ತಿಯು ಕ್ಷುಲ್ಲಕನಿರುವನು. ವ್ಯಕ್ತಿಯು ಎಂಥ ದೊಡ್ಡವನೇ ಇರಲಿ ರಾಷ್ಟ್ರವು ಅವನಿಗಿಂತ ಹೆಚ್ಚಿನದೇ. ಆದ್ದರಿಂದಲೇ ಒಮ್ಮೆ ಬಿಟ್ಟು ಹತ್ತು ಸಲವಾದರೂ ರಾಷ್ಟ್ರದ ಜಯಜಯಕಾರವನ್ನೇ ಮಾಡಬೇಕು. ವ್ಯಕ್ತಿಯ ಜಯಜಯಕಾರಕ್ಕೆ ಎಂದಿಗೂ ಪ್ರಾಧಾನ್ಯವನ್ನು ಕೊಡಕೂಡದು.

ಎಷ್ಟೋ ಕಡೆಗಳಲ್ಲಿ ಪ್ರಾಂತಾಭಿಮಾನದಿಂದ ಪ್ರೇರಿತರಾದ ಜನರು ತಮ್ಮ ಪ್ರಾಂತದ ಜಯಜಯಕಾರವನ್ನು ಮಾಡುವರು. ಹೀಗೆ ಮಾಡುವುದರಿಂದ ರಾಷ್ಟ್ರಕ್ಕಿಂತ

ಪ್ರಾಂತಕ್ಕೇ ಹೆಚ್ಚು ಹೆಚ್ಚು ಮಹತ್ವ ಸಿಕ್ಕು ರಾಷ್ಟ್ರವು ಮರೆಯಲ್ಪಡುವ ಸಂಭವವಿದೆ. ಮತ್ತು ಪ್ರಾಂತ ಪ್ರಾಂತಗಳಲ್ಲಿ ಯೋಗ್ಯವಲ್ಲದ ತಿಕ್ಕಾಟವೂ ಉತ್ಪನ್ನವಾಗಿ ರಾಷ್ಟ್ರದ ಹಾನಿಯಾಗುತ್ತದೆ. ಪ್ರಾಂತವು ರಾಷ್ಟ್ರದ ಒಂದು ಅಂಗವಿದೆ. ಅರ್ಥಾತ್ ಅದು ರಾಷ್ಟ್ರದಲ್ಲಿ ಸಮಾವೇಶವಾಗುತ್ತದೆಯೆಂದು ತಿಳಿದು ಕೇವಲ ರಾಷ್ಟ್ರದ ಜಯಜಯಕಾರವನ್ನೇ ಮಾಡಬೇಕು. ಮತ್ತು ಪ್ರಾಂತದ ಜಯಜಯಕಾರವನ್ನು ಮಾಡಕೂಡದು.

"ಭಾರತ ಮಾತಾಕೀ ಜಯ"

ಹಾಗು "ವಂದೇಮಾತರಂ" ಎಂದು ರಾಷ್ಟ್ರೀಯ ಭಾವನೆಯಿಂದ ಘೋಷಿಸಲ್ಪಟ್ಟ ಜಯಜಯಕಾರಗಳು ಕನ್ಯಾಕುಮಾರಿಯಿಂದ ಕೈಲಾಸ ಪರ್ವತದವರೆಗೆ ಹಬ್ಬಿದ ವಿಸ್ತಾರವಾದ ದೇಶದ ಮೂಲೆ ಮೂಲೆಗಳಲ್ಲಿಯೂ ಕೇಳಹತ್ತಬೇಕು. ಅರ್ಥಾತ್ ಇವೆರಡು ಜಯಜಯಕಾರಗಳನ್ನುಳಿದು ಇನ್ನಾವವನ್ನೂ ಮಾಡಬಾರದು. ಜಯಘೋಷದ ಧ್ವನಿಯು ಗಂಭೀರವೂ ಗಗನಭೇದಿಯೂ ಇರತಕ್ಕದ್ದು. ಹಾಗೂ ಅದರಲ್ಲಿ ಮುಖ್ಯವಾಗಿ ಶಿಸ್ತು ಇರತಕ್ಕದ್ದು.

ಈ ಜಯಜಯಕಾರಗಳನ್ನು ಕಲಿಸುವ ಪದ್ಧತಿಯು:— "ಭಾರತಮಾತಾಕೀಜಯ" ಇದರಲ್ಲಿಯ "ಭಾರತಮಾತಾಕೀ" ಎಂಬ ಶಬ್ದಗಳನ್ನು ಧ್ವಜರಕ್ಷಕನು ಗಟ್ಟಿಯಾದ ಧ್ವನಿಯಿಂದ ಮೊದಲು ಒದರಬೇಕು. ಬಳಿಕ ಎಲ್ಲರೂ "ಜಯ"ವೆಂದುಚ್ಚರಿಸಬೇಕು. ಹಾಗೆಯೇ "ವಂದೇಮಾತರಂ"ದಲ್ಲಿಯ

"ವಂದೇ„ ಎಂಬದನ್ನು ಧ್ವಜರಕ್ಷಕನು ಅನ್ನಬೇಕು. ಉಳಿದವರೆಲ್ಲರೂ "ಮಾತರಂ„ ಎಂದು ಒದರಬೇಕು.

ಜಯಘೋಷ ಮಾಡುವಾಗ್ಗೆ ಧ್ವನಿಯು ಸ್ಪಷ್ಟವಾಗಿಯೂ ಗಟ್ಟಿಯಾಗಿಯೂ ಇರುವ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕು. ಯಾಕಂದರೆ ರಾಷ್ಟ್ರದ ವಿಷಯದಲ್ಲಿ ನಮಗಾದ ಆನಂದವನ್ನು ಇತರರಿಗೆ ವಿದಿತ ಮಾಡುವುದೇ ಜಯಘೋಷದ ಇಂಗಿತವು. ಹಾಗೆ ವಿದಿತಮಾಡಬೇಕೆಂದಿದ್ದರೆ ನಾವು ಗಂಭೀರತನದಿಂದಲೂ ವೀರಾವೇಶದಿಂದಲೂ ಜಯಜಯಕಾರಗಳನ್ನು ಘೋಷಿಸಬೇಕು.

## ಹದಿಮೂರನೆಯ ಪಾಠ

# ಲಕ್ಷದಲ್ಲಿಡತಕ್ಕ ಮಹತ್ವದ ಮಾತುಗಳು

ರಾಷ್ಟ್ರಧ್ವಜವು ಅತ್ಯಂತ ಪವಿತ್ರವೂ ಆದರಣೀಯವೂ ಆದ ವಸ್ತುವಿದ್ದುದರಿಂದ ಯೋಗ್ಯ ರೀತಿಯಿಂದ ನಿರಂತರವೂ ಅದರ ಮರ್ಯಾದೆಯನ್ನು ಕಾಪಾಡಲಿಕ್ಕೆಬೇಕು. ಮನೆಯಲ್ಲಿಯ ಇತರ ಹೊಲಸು ಬಟ್ಟೆಗಳಂತೆ ರಾಷ್ಟ್ರಧ್ವಜವು ಸಾಮಾನ್ಯವಾದ ವಸ್ತ್ರವಲ್ಲ. ಅದರ ಬೆಲೆಯು ಪ್ರಾಣಕ್ಕಿಂತಲೂ ಅಧಿಕವಾಗಿದೆ. ಅದಕ್ಕಾಗಿ ಮುಂದಿನ ಸೂಚನೆಗಳನ್ನು ಎಲ್ಲರೂ ಸದಾ ನೆನಸಿನಲ್ಲಿಡಬೇಕು.

(೧) ಮನೆಯಲ್ಲಿಯಾಗಲಿ, ಬೇರೆಡೆಯಲ್ಲಾಗಲಿ, ಧ್ವಜವನ್ನು ಬೇಕಾದ ಕಡೆಗೆ ಬೀಳಗೊಡಬಾರದು. ಅದನ್ನು ಯಾವಾಗಲೂ ಸುರಕ್ಷಿತವೂ ಪವಿತ್ರವೂ ಆದ ಸ್ಥಳದಲ್ಲಿಡಬೇಕು. ಯಾರ ಕಾಲುಗಳೂ ಅದಕ್ಕೆ ತಾಕಕೂಡದು. ಸಾಮಾನ್ಯ ವಸ್ತ್ರಗಳಂತೆ ಅದನ್ನು ಉಪಯೋಗಿಸಿದರೆ ಅದರ ಅವಮಾನಮಾಡಿದಂತಾಗುವುದು. ಯಾವಾಗಲೂ ಅದನ್ನು ಮಡಿಚಿ ಬಾಯಿ ಕಟ್ಟಿದ ಚೀಲದಲ್ಲಿಯೇ ಇಡಬೇಕು.

(೨) ಅದನ್ನು ನೆಲಕ್ಕೆ ಮುಟ್ಟಿಸಕೂಡದು. ಅದರ ಮಡಿಕೆಗಳನ್ನಾಗಲಿ, ನಿರಿಗೆಗಳನ್ನಾಗಲಿ ಮಾಡುವುದಿದ್ದರೆ ಅಂತರವಾಗಿಯೇ ಮಾಡಿ ಆಮೇಲೆ ಧ್ವಜಸ್ತಂಭದ ಮೇಲೆ ಏರಿಸಬೇಕು.

(೩) ಹಳೆಯದೂ, ಹರಿದು ಹೋದುದೂ, ಬಣ್ಣ ಹೋದುದೂ ಆದ ಧ್ವಜವನ್ನೆಂದಿಗೂ ಸ್ತಂಭದ ಮೇಲೆ

ಏರಿಸಕೂಡದು ಅದು ಹಾಗಿದ್ದರೆ ಒಬ್ಬ ಸನ್ಯಾಸಿಗೆ ಸಮಾಧಿಯನ್ನು ಮಾಡಿದಂತೆ ಪವಿತ್ರ ಸ್ಥಳದಲ್ಲಿ ಅದನ್ನು ಅತ್ಯಂತ ಸನ್ಮಾನಪೂರ್ವಕವಾಗಿ ಹುಗಿಯಬೇಕು. ಇಲ್ಲವೆ ವಿಧಿಪೂರ್ವಕ ಸುಡಬೇಕು.

(೪) ಧ್ವಜವನ್ನು ಹಗಲಿರುಳು ಹಾರಾಡುವ ಹಾಗೆ ಇಡಕೂಡದು ಸೂರ್ಯೋದಯಕ್ಕೆ ಸರಿಯಾಗಿ ಅದನ್ನೇರಿಸಬೇಕು. ಮತ್ತು ಸೂರ್ಯಾಸ್ತಕ್ಕೆ ಸರಿಯಾಗಿ ಇಳಿಸಬೇಕು. ಇವೆರಡೂ ಕಾಲಕ್ಕೆ ವಿಧಿಪೂರ್ವಕ ವಂದನೆಯನ್ನರ್ಪಿಸಬೇಕು. ಕಡೆತನಕ ಹಾರಾಡುವಂತೆ ನಡಿಸಿದ ಸ್ಥಳದಲ್ಲಿ ಮಾತ್ರ ಅದು ಹಗಲಿರುಳು ಹಾರಾಡುವುದು. ಆದರೂ ಒಂದೂವರೆ ತಿಂಗಳಿಗೊಮ್ಮೆ ಧ್ವಜವಸ್ತ್ರವನ್ನು ಬದಲಿಸುತ್ತಿರಬೇಕು.

(೫) ಧ್ವಜವು ಹಾರಾಡುತ್ತಿರುವ ಕಾಲಕ್ಕೆ ಅದರ ಕಾವಲಿಗಾಗಿ ಯೋಗ್ಯ ನಿಲ್ಗಾವಲಿನ (ನಿಂತು ಕಾಯುವವರ) ಏರ್ಪಾಡು ಮಾಡಬೇಕು. ಮತ್ತು ಕಾವಲಿನ ಕೆಲಸವನ್ನು ಸರತಿಯ ಪ್ರಕಾರ ಮಾಡಿಸಬೇಕು

(೬) ದೀಪವು ಕೆಳಗೆ ಬೀಳುವುದು ದುಶ್ಚಿನ್ಹವೆಂದು ತಿಳಿಯುವಂತೆ ಧ್ವಜವು ಕೆಳಗೆ ಬೀಳುವುದಾಗಲಿ ಇಲ್ಲವೆ ಬಾಗುವುದಾಗಲಿ ಅಪಶಕುನವೆಂದು ತಿಳಿಯಬೇಕು.

(೭) ಧ್ವಜವನ್ನೇರಿಸಿದ ಬಳಿಕ ಮಳೆಯು ಬರುವ ಸಂಭವವಿದ್ದರೆ ರಕ್ಷಕನು ಅದನ್ನು ವಿಧಿಪೂರ್ವಕ ನಮಸ್ಕರಿಸಿ ಇಳಿಸಬೇಕು. ಮತ್ತು ಮಳೆಯು ನಿಂತಮೇಲೆ ಮರಳಿ ಅದನ್ನು ಏರಿಸಬೇಕು.

(೮) ಧ್ವಜವನ್ನು ಸ್ತಂಭದ ಮಧ್ಯಭಾಗದ ವರೆಗೆ ಏರಿಸಿ ಅಲ್ಲಿಯೇ ಅದನ್ನಿಡುವುದು ಸೂತಕದ ನಿದರ್ಶಕವಾಗಿದೆ. ದೇಶದ ಸೂತಕವನ್ನು ವ್ಯಕ್ತಪಡಿಸಲು ಧ್ವಜವನ್ನು ಅರ್ಧಕ್ಕೆಯೇ ಏರಿಸುವರು.ಉದಾಹರಣಾರ್ಥ ಲೋಕಮಾನ್ಯ ಟಿಳಕರ ಪುಣ್ಯತಿಥಿಯನ್ನು ಪಾಲಿಸುವಾಗ ಧ್ವಜವಂದನ ಸಮಾರಂಭವನ್ನು ಮಾಡಿದರೆ ಧ್ವಜವನ್ನು ಅರ್ಧ ಮಾತ್ರ ಏರಿಸಬೇಕು.

(೯) ಪ್ರತಿಯೊಂದು ರಾಷ್ಟ್ರದಲ್ಲಿ ಆ ರಾಷ್ಟ್ರದ ಧ್ವಜಕ್ಕೆ ಪ್ರಾಧಾನ್ಯವೂ ಅಗ್ರಪೂಜೆಯ ಮಾನವೂ ಕೊಡಲ್ಪಡುತ್ತವೆ. ಮತ್ತು ಇತರ ರಾಷ್ಟ್ರಗಳ ಧ್ವಜಗಳನ್ನು ರಾಷ್ಟ್ರ ಧ್ವಜದ ಛತ್ರದ ಕೆಳಗೆ ಸುರಕ್ಷಿತವಾಗಿ ಇಡುತ್ತಾರೆ. ನಮ್ಮ ರಾಷ್ಟ್ರಧ್ವಜದ ಸನ್ಮಾನವನ್ನು ಮಾಡುವುದೆಂದರೆ ಇತರ ರಾಷ್ಟ್ರಗಳ ಧ್ವಜಗಳ (ಅವು ಶತ್ರು ರಾಷ್ಟ್ರಗಳಿದ್ದರೂ ಸಹ) ಅಪಮಾನ ಮಾಡಿದಂತಲ್ಲ. ತಮ್ಮ ಧ್ವಜದ ಬೆನ್ನಹಿಂದೆ ಇತರ ಧ್ವಜಗಳಿಗೂ ಮರ್ಯಾದೆಯನ್ನು ಸಲ್ಲಿಸತಕ್ಕದ್ದೆಂದು ಧ್ವಜದ ವಿಷಯವಾಗಿ ಅಂತರರಾಷ್ಟ್ರೀಯ ನಿಯಮಗಳಿವೆ. ಪರಕೀಯರ ಧ್ವಜಗಳನ್ನು ಸುಡುವದು ಹರಿಯುವುದು, ಇಲ್ಲವೆ ಇತರ ರೀತಿಯಿಂದ ಅಪಮಾನ ಮಾಡುವದು ಅಕ್ಷಮ್ಯವಾದ ಅಪರಾಧಗಳು. ಆದರೆ ನಮ್ಮ ರಾಷ್ಟ್ರಧ್ವಜಕ್ಕೆ ಯಾವುದೇ ವಿಧದ ಅಪಮಾನವಾದರೆ ಮಾತ್ರ ಅದನ್ನೆಂದಿಗೂ ಸೈರಿಸಲಾಗದೆಂಬ ಮಾತನ್ನು ಸಂಪೂರ್ಣವಾಗಿ ಲಕ್ಷ್ಯದಲ್ಲಿಡಬೇಕು. ಜಗತ್ತಿನಲ್ಲಿಯ ಇತರ ಅನೇಕ ಧ್ವಜಗಳ ಜೊತೆಯಲ್ಲಿ ನಮ್ಮ ಧ್ವಜವೂ ಮೆರೆಯಬೇಕೆಂದಿದ್ದರೆ ಅದಕ್ಕೆ ಪೂಜ್ಯವಾದ ಅಗ್ರಸ್ಥಾನವನ್ನು ಕೊಡಲೇಬೇಕು.

(೧೦) ಯಾವುದೇ ಸಭೆಯಲ್ಲಿಯಾಗಲಿ ವಕ್ತೃವಿನ ಮತ್ತು ಅಧ್ಯಕ್ಷರ ಹಿಂದೆ ಬಲಭಾಗಕ್ಕೆ ಧ್ವಜವನ್ನು ಎತ್ತರವಾಗಿ ನಿಲ್ಲಿಸತಕ್ಕದ್ದು. ಅದನ್ನು ಅಧ್ಯಕ್ಷರ ಹಾಗೂ ವಕ್ತೃವಿನ ಮುಂದೆ ಎಂದೂ ನಿಲ್ಲಿಸಬಾರದು.

(೧೧) ಧ್ವಜವನ್ನು ಮೋಟಾರಕ್ಕೆ ಹಚ್ಚಬೇಕಾಗಿದ್ದರೆ ಯೋಗ್ಯ ಅಳತೆಯುದನ್ನು ತೆಗೆದುಕೊಂಡು ಅದನ್ನು "ರೇಡಿಯೇಟರ ಕ್ಯಾಪಿನ" ಮೇಲೆ ಕೆಳಗೆ ಉರುಳಿ ಬೀಳದ ಹಾಗೆ ವ್ಯವಸ್ಥಿತವಾಗಿಯೂ ಗಟ್ಟಿಯಾಗಿಯೂ ಹಚ್ಚಬೇಕು. ಮೋಟಾರಕ್ಕಾಗಲೀ, ಅಥವಾ ಇತರ ಯಾವುದೇ ಗಾಡಿಗಳಿಗಾಗಲಿ, ಪಾರ್ಶ್ವ ಭಾಗಗಳಲ್ಲಿ ಧ್ವಜವನ್ನು ಎಂದೂ ಹಚ್ಚಕೂಡದು.

(೧೨) ಧ್ವಜದ ಮೇಲೆ ರಾಟಿಯ ಹೊರತು ಯಾವದೇ ಬಗೆಯ ಎರಡನೇ ಚಿನ್ಹವನ್ನಾಗಲೀ, ಚಿತ್ರವನ್ನಾಗಲೀ, ಅಕ್ಷರಗಳನ್ನಾಗಲೀ, ಕಸೀದೆಯನ್ನಾಗಲೀ, ಎಂದಿಗೂ ಯಾವ ಪ್ರಸಂಗದಲ್ಲಿಯೂ ಚಿತ್ರಿಸಕೂಡದು. ನಿರ್ದಿಷ್ಟ ಚಿನ್ಹಗಳ ಹೊರತು ಬೇರೆ ಚಿನ್ಹಗಳಿದ್ದರೆ ಅದಕ್ಕೆ ರಾಷ್ಟ್ರ ಧ್ವಜವೆಂದೆನ್ನಲಾಗದು.




ಮುದ್ರಕರು:- ಖಂ. ರಾ. ಭಿಸೆ, ಕರ್ನಾಟಕ ಪ್ರಿಂಟಿಂಗ ವರ್ಕ್ಸ ಧಾರವಾಡ
೯೯೦೫,೩೦,೫೦೦೦.

## ಒಂದನೆಯ ಪರಿಶಿಷ್ಟ

## ರಾಷ್ಟ್ರೀಯ ಗೀತೆ

### ವಂದೇ ಮಾತರಂ

ಸುಜಲಾಂ ಸುಫಲಾಂ ಮಲಯಜಶೀತಲಾಂ
ಸಸ್ಯ ಶಾಮಲಾಂ ಮಾತರಂ || ||ಽ||

ಶುಭ್ರಜ್ಯೋತ್ಸ್ನಾ ಪುಲಕಿತಯಾಮಿನೀಂ |
ಫುಲ್ಲಕುಸುಮಿತ ದ್ರುಮದಲ ಶೋಭಿನೀಂ |
ಸುಹಾಸಿನೀಂ ಸುಮಧುರ ಭಾಷಿಣೀಂ |
ಸುಖದಾಂ ವರದಾಂ ಮಾತರಂ ||ವಂದೇ||

ತ್ರಿಂಶತ್ಕೋಟಿ ಕಂಠ ಕಲಕಲ ನಿನಾದ ಕರಾಲೇ |
ದ್ವಿತ್ರಿಂಶತ್ಕೋಟಿ ಭುಜೈರ್ಧೃತ ಖರಕರವಾಲೇ |
ಕೇ ಬಲೇ ಮಾ ತುಮಿ ಅಬಲೇ |
ಬಹುಬಲಧಾರಿಣೀಂ ನಮಾಮಿ ತಾರಿಣೀಂ |
ರಿಪುದಲ ವಾರಿಣೀಂ ಮಾತರಂ ||ವಂದೇ||

# ಎರಡನೆಯ ಪರಿಶಿಷ್ಟ

## ಧ್ವಜಗಾನ

ಧಾಟಿ:—ಸಬಸೇ ರಾಮಭಜನ—

ವಿಜಯೀ ವಿಶ್ವ ತಿರಂಗಾ ಪ್ಯಾರಾ
ಝಂಡಾ ಊಂಚಾ ರಹೇ ಹಮಾರಾ ॥ಪಲ್ಲ॥

ಸದಾ ಶಕ್ತಿ ಬರಸಾನೇವಾಲಾ।
ಪ್ರೇಮಸುಧಾ ಸರಸಾನೇವಾಲಾ॥
ವೀರೋಂಕೋ ಹರಷಾನೇವಾಲಾ।
ಮಾತೃಭೂಮಿಕಾ ತನಮನಸಾರಾ ॥ಝಂಡಾ॥೧॥

ಸ್ವತಂತ್ರತಾಕೇ ಭೀಷಣ ರಣಮೇ।
ಲಖಕರ ಬಢೇ ಜೋಶ ಕ್ಷಣಕ್ಷಣಮೇ॥
ಕಾಪೇ ಶತ್ರು ದೇಖಕರ ಮನಮೇ।
ಮಿಟಜಾವೇ ಭಯ ಸಂಕಟ ಸಾರಾ ॥ಝಂಡಾ॥೨॥

ಇಸ ಝಂಡೇಕೆ ನೀಚೆ ನಿರ್ಭಯ।
ಲೇ ಸ್ವರಾಜ್ಯ ಯಹ ಅವಿಚಲ ನಿಶ್ಚಯ॥
ಬೋಲೋ ಭಾರತ ಮಾತಾಕಿ ಜಯ।
ಸ್ವತಂತ್ರತಾಹೀ ಧ್ಯೇಯ ಹಮಾರಾ ॥ಝಂಡಾ॥೩॥

ಆವೋ ಪ್ಯಾರೇ ವೀರೋ ಆವೋ।
ದೇಶಧರ್ಮ ಪರ ಬಲಿಬಲಿ ಜಾವೋ॥
ಏಕಸಾಥ ಸಬ ಮಿಲಕರ ಗಾವೋ।
ಪ್ಯಾರಾ ಭಾರತ ದೇಶ ಹಮಾರಾ ॥ಝಂಡಾ॥೪॥

(೨)

ಇಸಕೀ ಶಾನ ನ ಜಾನೇ ಪಾಯೇ।
ಚಾಹೇ ಜಾನ ಭಲೇಹಿ ಜಾಯೇ॥
ವಿಶ್ವವಿಜಯ ಕರಕೇ ದಿಖಲಾಯೇ।
ತಬಹೋವೇ ಪ್ರಣಪೂರ್ಣ ಹಮಾರಾ ।ಝಂಡಾ॥೫॥

## ಮೂರನೆಯ ಪರಿಶಿಷ್ಟ

# ರಾಷ್ಟ್ರೀಯ ಪತಾಕೆ

ರಾಷ್ಟ್ರಗಗನಕೀ ದಿವ್ಯಜ್ಯೋತಿ ರಾಷ್ಟ್ರೀಯ ಪತಾಕಾ ನಮೋನಮೋ।
ಭಾರತ ಜನನೀಕೆ ಗೌರವ ಕೀ ಅವಿಚಲ ಶಾಖಾ ನಮೋನಮೋ।
ಕರಮೇ ಲೇಕರ ಇಸೇ ಶೂರ ಮಾತೀಸಕೋಟಿ ಭಾರತಸಂತಾನ।
ಹಸತೇ ಹಸತೇ ಮಾತೃಭೂಮಿಕೇ ಚರಣೋಪರ ಹೋಂಗೇ ಬಲಿದಾನ।
ಹೊಘೋಷಿತ ನಿರ್ಭೀಕ ವಿಶ್ವಮೇ ತರಲ ತಿರಂಗಾ ನವಲ ನಿಶಾನ।
ವೀರ ಹೃದಯಖಲ ಉಠೇ ಮಾರಲೇ ಭಾರತೀಯ ಕ್ಷಣಮೇ ವೈದಾನ।
ಹೋನಸನಸಮೇ ವ್ಯಾಪ್ತ ಚರಿತ ಶೂರಮಾಶಿವಾಕಾ ನಮೋನಮೋ
ರಾಷ್ಟ್ರಗಗನಕೀ ದಿವ್ಯ ಜ್ಯೋತಿ ॥೧॥

ನವಯುವಕೋ! ಸ್ವಾತಂತ್ರ್ಯ ಸಮರಮೇ ನವಜೀವನ ಸಂಚಾರಕರೋ।
ಶಸ್ತ್ರ ಅಹಿಂಸಾಸೇ ದಲಕರ ದಾಸತಾ ದುರ್ಗಕೋ ಕ್ಷಾರಕರೋ।
ಶಾಂತಿ ಕಾಂತಿ ಯುಗಮೇ ಹೇ ವೀರೋ ಜೀವನ ಸುಮನ ನಿಸಾರಕರೋ।
ಊಚೇ ಸ್ವರಸೇ ಏಕಸಾಥ ಜನನೀಕೇ ಜಯ ಜಯಕಾರಕರೋ।
ಶಕ್ತಿ ದೇಖಕರ ಶತ್ರು ಶಿಬಿರಮೇ ಮಚೇಸನಾಕಾ ನಮೋನಮೋ
ರಾಷ್ಟ್ರಗಗನಕೀ ದಿವ್ಯ ಜ್ಯೋತಿ ॥೨॥

ಉಚ್ಚಹಿಮಾಚಲಕೀ ಚೋಟೀಪರ ಜಾಕರ ಇಸೇ ಉಡಾಯೇಂಗೆ।
ವಿಶ್ವವಿಜಯಿನೀ ರಾಷ್ಟ್ರಪತಾಕಾ ಕಾ ಗೌರವ ಫಹರಾಯೇಂಗೆ।
ಸಮರಾಂಗಣಮೇ ಲಾಡಲಾಡಿಲೇ ಲಾಖೋ ಬಲಿಬಲಿ ಜಾಯೇಂಗೆ।
ಸಬಸೆ ಊಂಚೆ ರಹೇ ನ ಇಸಕೋ ನೀಚೆ ಕಭೀ ಝುಕಾಯೇಂಗೆ।
ಗೂಜೇ ಸ್ವರ ಸಂಸಾರ ಸಿಂಧುಮೇ ಸ್ವತಂತ್ರತಾಕಾ ನಮೋನಮೋ
ರಾಷ್ಟ್ರಗಗನಕೀ ದಿವ್ಯ ಜ್ಯೋತಿ ॥೩॥

